# ಜನತಾ ಗೀತೆಗಳು

ಸಂಗ್ರಾಹಕರು :

ಡಾ. ಬಿ. ಎಸ್. ಗದ್ದಗಿಮಠ, ಎಂ. ಎ, ಪಿಎಚ್. ಡಿ.
ಕೆರೂರ





ತೃತೀಯ ಪುಷ್ಪ

ಸೋ: ೧೯೫೭

ಬೆಲೆ ೧—೮—೦

ಪ್ರಕಾಶಕರು :
ಶ್ರೀ. ಎಸ್. ವ್ಹಿ. ಕಡೂರ, ಎಂ. ಎ.
ಕಾರ್ಯದರ್ಶಿ,
ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಲಿ.
ಧಾರವಾಡ


ಪ್ರಥಮ ಮುದ್ರಣ . ೩೦೦೦ ಪ್ರತಿಗಳು

ಮುದ್ರಕರು :
ಶ್ರೀ. ಡಿ. ಟಿ. ಕಾಯಸ್ಥ,
ವ್ಯವಸ್ಥಾಪಕ,
ರವೀಂದ್ರ ಮುದ್ರಣಾಲಯ, ಧಾರವಾಡ

# ಪ್ರಕಾಶಕರ ಮಾತು

ಕನ್ನಡವು ಪುರಾತನ ಭಾಷೆಗಳಲ್ಲೊಂದಾಗಿದೆ. ಆದರೆ ಇತ್ತೀಚಿಗೆ ಅದರ ಪ್ರಗತಿಯು ತೃಪ್ತಿಕರವಾಗಿ ಸಾಗಿಲ್ಲವೆಂದು ಹಿರಿಯ ಕನ್ನಡಿಗರು ಮರುಗತೊಡಗಿದ್ದಾರೆ. ಉತ್ತಮ ಸಾಹಿತ್ಯ ಕೃತಿಗಳು ಹೊರಬರುತ್ತಿಲ್ಲ. ಜನರಲ್ಲಿ ವಾಚನಾಭಿರುಚಿಯು ಬೆಳೆದುಬರುತ್ತಿಲ್ಲ. ಲೇಖಕರಿಗೆ ಪ್ರೋತ್ಸಾಹನೆ ಇಲ್ಲ. ವ್ಯಕ್ತಿಗಳಾಗಲೀ ಪುಸ್ತಕ ವ್ಯಾಪಾರಿಗಳಾಗಲೀ ಸಾಹಿತ್ಯ ಸೇವೆಗಾಗಿ ನಡಕಟ್ಟಿ ನಿಂತ ಉದಾಹರಣೆಗಳು ನಮ್ಮಲ್ಲಿ ತೀರ ಕಡಿಮೆ. ಹೀಗಾಗಿ, ಉತ್ತಮ ಬರೆಹಗಾರರಿಗೆ ಉತ್ತೇಜನವನ್ನು ಕೊಡುವ, ಜನತೆಯಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸುವ, ಹಳ್ಳಿಗಳಲ್ಲಿಯೂ ಕೂಡ ವಾಚನಾಲಯ ಅಭಿರುಚಿಯನ್ನು ಬೆಳೆಯಿಸುವ ಉದ್ದೇಶಗಳನ್ನೊಳಗೊಂಡ ಒಂದು ಸಂಸ್ಥೆಯನ್ನು ಸಹಕಾರಿ ತತ್ವದ ಮೇರೆಗೆ ಸಂಘಟಿಸಬೇಕೆಂದು ಮುಂಬಯಿ ರಾಜ್ಯದ ಸಹಕಾರಿ ಮಂತ್ರಿಗಳಾದ ಮಾನ್ಯ ಶ್ರೀ. ಮಲ್ಲನಗೌಡರು ಪಾಟೀಲ ಅವರು ಮುಂದಾದರು. ಅವರ ಪ್ರಯತ್ನವೇ ಈಗ ಮೂರ್ತಸ್ವರೂಪವನ್ನು ತಾಳಿ 'ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ ಲಿ. ಧಾರವಾಡ' ಎಂಬ ಅಭಿದಾನದಲ್ಲಿ ಕಾರ್ಯ ಮಾಡುತ್ತಲಿದೆ. ಲೇಖಕರಿಗೆ ಹಣದ ರೂಪದಲ್ಲಿ ಪ್ರೋತ್ಸಾಹಿಸುವ ಉದ್ದೇಶವುಳ್ಳ ಸಂಸ್ಥೆಗಳಲ್ಲಿ ಇದೇ ಮೊದಲನೆಯದು.

ವಿವಿಧ ವಿಷಯಗಳ ಮೇಲೆ ಕೃತಿಗಳನ್ನು ಬರೆಯಿಸಿ ಸದ್ಯಕ್ಕೆ ೧೫೦ ಪುಟಗಳ ನಾಲ್ಕು ಪುಸ್ತಕಗಳನ್ನು ಪ್ರತಿವರ್ಷ ಒದಗಿಸಲಾಗುವದು. ಪರಿಸ್ಥಿತಿಯು ಹೆಚ್ಚು ಅನುಕೂಲವಾದಂತೆ ಹೆಚ್ಚೆಚ್ಚು ಪುಸ್ತಕಗಳನ್ನು ಕೊಡಬಹುದು. ಈಗ ಕನ್ನಡನಾಡಿನ ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಸಮಾಜಶಾಸ್ತ್ರಗಳನ್ನು ಮುಖ್ಯವಾಗಿಟ್ಟುಕೊಂಡು ಗ್ರಂಥಗಳನ್ನು ಬರೆಯಿಸಲಾಗುವದು.

ಪ್ರತಿವರುಷ ಯಾವ ಯಾವ ವಿಷಯಗಳ ಬಗೆಗೆ ಪುಸ್ತಕಗಳನ್ನು ಪ್ರಕಟಿಸಬೇಕೆಂಬುದನ್ನು ನಿರ್ಣಯಿಸಿ ಹೆಸರಾದ ಲೇಖಕರಿಂದ ಬರೆಯಿಸಿ, ಅಂತಹ ಲೇಖಕರಿಗೆ ಸಂಭಾವನೆಯನ್ನು ಕೊಡಲಾಗುವದು. ಗ್ರಂಥಪ್ರಕಟನೆಯ ಬಗೆಗೆ ಬರಬಹುದಾದ ಆವಶ್ಯಕ ಎಲ್ಲ ವೆಚ್ಚವನ್ನು ಸಂಘದ ನಿಯಮಗಳಿಗೆ ಅನುಸರಿಸಿ

ಒಟ್ಟಿನ ಆದಾಯದಲ್ಲಿ ಕಳೆದು, ಉಳಿದ ನಿಕ್ಕಿ ಲಾಭದಲ್ಲಿ ಅರ್ಧದಷ್ಟನ್ನು ಲೇಖಕರಿಗೆ ಕೊಡಲಾಗುವದು. ಅವಶ್ಯಕತೆಯ ಮೇರೆಗೆ ಅವುಗಳ ಎರಡನೆಯ ಹಾಗು ಮುಂದಿನ ಮುದ್ರಣಗಳನ್ನು ಪ್ರಕಟಿಸಲಾಗುವದು. ಆಗಲೂ ಸಹಿತ ಇದೇ ನಿಯಮವು ಅನ್ವಯಿಸುತ್ತದೆ. ಆದರೆ, ಪ್ರಾರಂಭಕ್ಕೆ ಲೇಖಕ-ಗ್ರೆ ಕೈಬರೆಹದ ಪ್ರತಿಯು ತಲ ಪಿ ಸಂಘದಿಂದ ಸ್ವೀಕರಿಸಲ್ಪಟ್ಟಮೇಲೆ, ಕೆಲವೊಂದು ಹಣವನ್ನು ನಿಯಮಗಳಿಗನುಸರಿಸಿ ಮುಂಗಡವಾಗಿ ಕೊಡಲಾಗುವದು

ಈ ಯೋಜನೆಯ ಮೇರೆಗೆ, ಇದೀಗ ಸಂಘದ ಮಾಲೆಯ ಮೂರನೆಯ ಪುಷ್ಪವಾಗಿ "ಜನತಾ ಗೀತೆಗಳು" ಎಂಬ ಗ್ರಂಥ ಓದುಗರ ಕೈಸೇರುತ್ತಲಿದೆ ಜನಪದ ಸಾಹಿತ್ಯದ ಕೋಶಾಗಾರರಾದ ಶ್ರೀ. ಬಿ. ಎಸ್. ಗದ್ದಗಿಮಠ ಅವರು ತಮ್ಮ ಭಾಂಡಾರದಿಂದ ಪ್ರಾಯಶಃ ಇದುವರೆಗೆ ಪ್ರಕಟವಾಗದಿರುವ ಉತ್ತಮ ಗೀತೆಗಳನ್ನೇ ಆಯ್ದುಕೊಟ್ಟಿದ್ದಾರೆ. ಶ್ರೀ. ಗದ್ದಗಿಮಠರಲ್ಲಿ ಲಕ್ಷಕ್ಕೂ ಮಿಕ್ಕು ವಷ್ಟು ಜಾನಪದ ಹಾಡುಗಳ ಸಂಗ್ರಹವಿದೆಯೆಂದು ಕೇಳುತ್ತೇವೆ. ಈ ಹಾಡುಗಳಲ್ಲಿ ಹುದುಗಿರುವ ಕನ್ನಡ ಸಂಸ್ಕೃತಿಯ ಸಂಪತ್ತು, ಸಾಹಿತ್ಯ ಜೀವನಗಳನ್ನು ಕುರಿತು ಅವರು ಹಲವಾರು ದೃಷ್ಟಿಯಿಂದ ಸಂಶೋಧಿಸಿ ಒಂದು ನೆಲೆಗೆ ನಿಂತಿದ್ದಾರೆ. ಅವರ ಸಂಗ್ರಹವೆಲ್ಲ ಪ್ರಕಟವಾದರೆ ಕನ್ನಡಿಗರ ಜೀವನದ ಮೇಲೆ ಹೊಸಬೆಳಕು ಬೀಳುವುದಲ್ಲದೆ ನಮ್ಮ ಪುರಾತನ ಸಂಸ್ಕೃತಿಯ ಘನತೆ, ಗೌರವಗಳ ಮನವರಿಕೆಯಾಗಬಹುದಾಗಿದೆ. ಶ್ರೀ. ಗದ್ದಗಿಮಠರು ಒಂದೊಂದು ತ್ರಿಪದಿಯನ್ನು ವಿವಿಧ ಧಾಟಿ, ರೀತಿಗಳಿಂದ ಪರಿಣಾಮಕಾರಿಯಾಗಿ ಹಾಡಬಲ್ಲವರಾಗಿದ್ದಾರೆ. ಅವರ ಜೀವನವೇ ಈ ಗೀತೆಗಳ ಸಂಗ್ರಹ, ಪ್ರಕಾಶನಕ್ಕಾಗಿ ಮುಡಿಪಾಗಿದೆಯೆಂದರೂ ಸಲ್ಲುವದು.

ನಮ್ಮ ಮಾಲೆಯ ನಾಲ್ಕನೆಯ ಪುಷ್ಪವಾದ 'ನಾಲ್ವಡಿಸೆಯ ನೋಟ' ವು ಪ್ರಕಟನೆಗೆ ಸಿದ್ಧವಾಗಿದೆ. ಕನ್ನಡ ನಾಡಿನ ಪ್ರತಿಭಾನ್ವಿತ ಕವಿಗಳೂ ಉತ್ತಮ ಲೇಖಕರೂ ಆದ ಶ್ರೀ. ಡಿ. ಎಸ್. ಕರ್ಕಿ, ಎಂ. ಎ., ಪಿಎಚ್. ಡಿ. ಅವರು ಜೀವನ,ಸಾಹಿತ್ಯ, ಶಿಲ್ಪ, ಪ್ರಕೃತಿಗಳನ್ನು ಕುರಿತು ಹೃದಯಂಗಮವಾಗಿ ಬರೆದ ಬರೆಹಗಳ ಅನರ್ಘ್ಯ ಸಂಗ್ರಹವೇ 'ನಾಲ್ವಡಿಸೆಯ ನೋಟ' ವಾಗಿದೆ. ನಾಡು ಹಾಗು ನಾಡವರ ವೈಭವದ ದಿಕ್ ದರ್ಶನವನ್ನು ಇದರಲ್ಲಿ ಕಾಣಬಹುದಾಗಿದೆ.

ಇಂಥ ಸಂಸ್ಥೆಗಳ ಘನವಾದ ಉದ್ದೇಶಗಳು ಸಫಲವಾಗಬೇಕಾದರೆ ಲೇಖಕರ ಮತ್ತು ಸಂಘ-ಸಂಸ್ಥೆಗಳ ವಿಶೇಷವಾಗಿ ಸಹಕಾರಿ ಸಂಸ್ಥೆಗಳ ಸಹಕಾರವು ಅತ್ಯವಶ್ಯ. ಕನ್ನಡಿಗರೆಲ್ಲರೂ ಚಂದಾದಾರರಾಗಿ, ಶೇರುದಾರರಾಗಿ, ಓದುಗರಾಗಿ ಪ್ರೋತ್ಸಾಹಿಸಬೇಕು. ಈ ಸಂಘದ ಶೇರುದಾರರಾಗಬೇಕಾದರೆ ಕನಿಷ್ಟ ೨೫ ರೂ ಗಳ ಒಂದು ಶೇರನ್ನು ಕೊಳ್ಳಬೇಕಾಗುವದು ಮತ್ತು ಒಂದು ರೂಪಾಯಿ ಪ್ರವೇಶ ಧನವನ್ನು ಕಳಿಸಬೇಕಾಗುವದು. ಸದಸ್ಯರಾಗಿದ್ದ ಚಂದಾದಾರರಾಗಬಯಸುವವರು ೫ ರೂ. ಗಳನ್ನು ಪ್ರತಿವರ್ಷ ಕೊಡಬೇಕಾಗುವದು. ಸದಸ್ಯತ್ವವಿಲ್ಲದೆ ಚಂದಾದಾರರಾಗ ಬಯಸುವವರು ಪ್ರತಿವರ್ಷ ಆರು ರೂ. ಗಳನ್ನು ಚಂದಾಹಣವೆಂದು ಕೊಡಬೇಕಾಗುವದು. ಕನ್ನಡಿಗರೆಲ್ಲರೂ ಸಹಕರಿಸಬೇಕೆಂದು ಬಿನ್ನಹ.

ನಮ್ಮ ಕರೆಗೆ ಓಗೊಟ್ಟು ಪ್ರಸ್ತುತ ಗ್ರಂಥದಲ್ಲಿಯ ಗೀತೆಗಳನ್ನು ಸಂಗ್ರಹಿಸಿ ಕೊಟ್ಟ ಶ್ರೀ. ಬಿ. ಎಸ್. ಗದ್ದಗಿಮಠ ಅವರಿಗೆ ನಾವು ತುಂಬ ಋಣಿಯಾಗಿದ್ದೇವೆ. ಈ ದಿಶೆಯಲ್ಲಿ ಇವರ ಅನುಭವದ ಸದುಪಯೋಗವನ್ನು ಸರಕಾರದವರೂ ಕನ್ನಡಿಗರು ಪಡೆಯಲೆಂದು ಆಶಿಸುತ್ತೇವೆ. ಈ ಪುಸ್ತಕವನ್ನು ಅಲ್ಪ ವೇಳೆಯಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟ ರವೀಂದ್ರ ಮುದ್ರಣಾಲಯ, ಧಾರವಾಡ, ಅವರಿಗೂ ನಾವು ಉಪಕೃತರಾಗಿದ್ದೇವೆ.

ಅಲ್ಪ ಬೆಲೆಯಲ್ಲಿ, ಗುಣ ಮತ್ತು ಗಾತ್ರದಲ್ಲಿ ಉತ್ತಮ ಸಾಹಿತ್ಯ ಕೃತಿಗಳನ್ನು ಪ್ರಕಟಿಸುವ ಉದ್ದೇಶವುಳ್ಳ ನಮ್ಮ ಸಂಸ್ಥೆಗೆ, ಈಗಾಗಲೇ ಚಂದಾದಾರರಾಗಿ, ಶೇರದಾರರಾಗಿ ಮಹನೀಯರು ಮತ್ತು ಸಂಘ-ಸಂಸ್ಥೆಗಳು ನೀಡಿರುವ ನೆರವನ್ನು ನಾವು ಮರೆಯುವಂತಿಲ್ಲ. ಕನ್ನಡಿಗರು ಈ ಪ್ರಕಟನೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವರೆಂದು ಆಶಿಸುತ್ತೇವೆ.

| | | |
|---|---|---|
| ಧಾರವಾಡ | **ಶಿ. ಚೆ. ನಂದಿಮಠ** | **ಸ್ಥಿ. ಎಸ್. ಬಸವನಾಳ** |
| ದಿ. ೨೦-೫-೫೭ | ಕಾರ್ಯಾಧ್ಯಕ್ಷರು | ಕಾರ್ಯಾಧ್ಯಕ್ಷರು |
| | ಸಂಪಾದಕ ಮಂಡಲ | ಸಂಚಾಲಕ ಸಮಿತಿ |

# ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ., ಲಿ. ಧಾರವಾಡ

## ಸಂಪಾದಕರ ಸಮಿತಿ

೧. ಮಾನ್ಯ ಶ್ರೀ. ಮಲ್ಲನಗೌಡರು ಪಾಟೀಲ, ಬಿ. ಎ., ಎಲೆಲ್. ಬಿ.
ಸಹಕಾರಿ ಮಂತ್ರಿಗಳು, ಮುಂಬಯಿ.

೨. ಡಾ. ಎಸ್. ಸಿ. ನಂದಿಮಠ, ಎಂ. ಎ., ಪಿಎಚ್. ಡಿ. (ಲಂಡನ್)
ಪ್ರಿನ್ಸಿಪಾಲ, ಬಸವೇಶ್ವರ ಕಾಲೇಜ, ಬಾಗಲಕೋಟ (ಚೇರಮನ್)

೩. ಪ್ರಿ. ವ್ಹಿ. ಕೆ. ಗೋಕಾಕ, ಎಂ. ಎ. (ಆಕ್ಸಫರ್ಡ),
ಪ್ರಿನ್ಸಿಪಾಲ, ಕರ್ನಾಟಕ ಕಾಲೇಜ, ಧಾರವಾಡ

೪. ಪ್ರೊ. ಎಸ್. ಎಸ್. ಮಾಳವಾಡ, ಡಾಯರೆಕ್ಟರ, ಕನ್ನಡ ರಿಸರ್ಚ
ಇನ್‌ಸ್ಟಿಟ್ಯೂಟ, ಧಾರವಾಡ.

೫. ಶ್ರೀ. ವ್ಹಿ. ಎಸ್. ಬಸವನಾಳ, ಬಿ. ಎ., ಎಲೆಲ್. ಬಿ.
ಸಂಪಾದಕರು, "ಜಯಕರ್ನಾಟಕ", ಧಾರವಾಡ.

## ಚಾಲಕರ ಸಮಿತಿ

ಚೇರಮನ್ :

೧. ಶ್ರೀ. ವ್ಹಿ. ಎಸ್. ಬಸವನಾಳ, ಚೇರಮನ್, ಕೆ. ಸಿ. ಸಿ. ಬ್ಯಾಂಕ. ಲಿ. ಧಾ.

ಸದಸ್ಯರು :

೨. ಡಾ. ಎಸ್. ಸಿ. ನಂದಿಮಠ, ಎಂ. ಎ., ಪಿಎಚ್. ಡಿ. (ಲಂಡನ್)

೩. ಶ್ರೀ. ಪಿ. ಬಿ. ಉಗರಗೋಳ, ಬಿ. ಎ., ಎಲೆಲ್. ಬಿ., ಬೆಳಗಾವಿ,

೪. ಶ್ರೀ. ಎಸ್. ಪಿ. ಪಂಡಿತ, ಬಿ ಎ., ಎಲೆಲ್. ಬಿ.,
ಚೇರಮನ್, ಡಿ. ಸಿ. ಸಿ ಬ್ಯಾಂಕ, ಲಿ. ಶಿರಸಿ (N. K).

೫. ರಜಿಸ್ಟ್ರಾರ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಶ್ರೀ. ಎಸ್. ಬಿ. ಹುಬಳಿ, ಆಯ್. ಎ. ಎಸ್. (Retd.) ಬೆಳಗಾಂವ.

೭. ಶ್ರೀ. ಎಂ. ಪಿ. ನಾಡಗೌಡ, ಬಿ. ಎ., ಎಲೆಲ್. ಬಿ.,
ಚೇರಮನ್, ಡಿ. ಸಿ. ಸಿ. ಬ್ಯಾಂಕ, ಲಿ. ವಿಜಾಪೂರ.

೮. ಶ್ರೀ. ಎಸ್. ಎಂ. ಮಲ್ಲನಗೌಡರ, ಗೌ. ಕಾರ್ಯದರ್ಶಿ,
ಕರ್ನಾಟಕ ಡಿವಿಜನಲ್ ಕೋ-ಆಪ್. ಬೋರ್ಡ, ಧಾರವಾಡ.

೯. ಅಸಿಸ್ಟಂಟ್ ರಜಿಸ್ಟ್ರಾರ, ಸಿ. ಎಸ್., ಧಾರವಾಡ.

ಶ್ರೀ. ಎಸ್. ವ್ಹಿ. ಕಡೂರ, ಎಂ. ಎ., ಎಫ್. ಆರ್. ಇ. ಎಸ್.,
ಸೆಕ್ರೆಟರಿ, ಕ. ಸ. ಸಾಹಿತ್ಯ ಸಂಘ, ಲಿ. ಧಾರವಾಡ.

# ಪರಿವಿಡಿ

# ಮೊದಲ ಮಾತು

ನಾನು ಸಂಕಲಿಸಿದ ಜನಪದ ಸಾಹಿತ್ಯದಲ್ಲಿಯ ಹಲಕೆಲವು ಹಾಡು ಗಳನ್ನು ಸಂಗ್ರಹಿಸಿ "ಜನತಾ ಗೀತೆಗಳು" ಎಂಬ ಪುಸ್ತಕ ರೂಪದಲ್ಲಿ ಕನ್ನಡಿ ಗರ ನೆದರಿಗೆ ತರಲು ನನಗೆ ತುಂಬ ಆನಂದ. ಇದು ನನ್ನ ಮೂರನೆಯ ಸಂಗ್ರಹ. ಇದನ್ನು ಬೆಳಕಿಗೆ ತರಲು ಧಾರವಾಡದ 'ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ'ದ ನೆರವು ಇಲ್ಲದೆ ಹೋಗಿದ್ದರೆ, ಈ ಸಂಗ್ರಹವು ಎಂದು ಬೆಳ ಕಿಗೆ ಬರುತಿತ್ತೊ ಏನೊ! ಆದುದರಿಂದ ಆ ಸಂಘದ ಸಂಚಾಲಕ ಮಹನೀಯ ರಿಗೆ ಮೊದಲು ನನ್ನ ಕೃತಜ್ಞತೆಯ ಅಭಿನಂದನೆಗಳು.

**ಸಂಕಲನ ಕಾರ್ಯ :**

ನನಗೆ ಜನಪದ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿದ್ದು ನನ್ನ ತಾಯಿತಂದೆ ಗಳಿಂದ. ತ್ರಿಪದಿಯನ್ನು ನೂರೊಂದು ರಾಗದಲ್ಲಿ ಹಾಡಿ ಜನವನ್ನು ತಣಿಸುವ ನನ್ನ ತಾಯಿಯೇ ನನಗೆ ಜನಪದ ಸೊಲ್ಲನಿತ್ತಳು. ಹೀಗೆ ಅಭಿರುಚಿ ತುಂಬಲು ಹಳ್ಳಿಗರ ಹಾಡುಗಳ ಗುಂಗಾನಕ್ಕೆ ಮನಸೋತು ಜೀವನದ ಪರಿವೆಯಿ ಲ್ಲದೆ, ಉತ್ತರ ಕರ್ನಾಟಕದಲ್ಲಿ ಅಲೆದಾಡಿ ಕ್ರಿ. ಶ. ೧೯೪೩ರಿಂದ ಹಾಡುಗಳನ್ನು ಸಂಕಲಿಸತೊಡಗಿದೆ. ಉತ್ತರ ಕರ್ನಾಟಕವನ್ನು ಮಲೆನಾಡು ಹಾಗೂ ಬಯ ಲುನಾಡು ಎಂದು ಭಾಗ ಮಾಡಿಕೊಂಡು ಸಂಕಲನವನ್ನು ಮೊದಲು ಮಾಡಿದೆ. ನನ್ನ ಮಲೆನಾಡು ಕಾರವಾರ ಗಡಿಯವರೆಗೆ ಹರಿದಿದೆ. ಹಲಕೆಲವು ಅನನು ಕೂಲತೆಯ ಮೂಲಕ ನನ್ನ ಸಂಕಲನವು ಮಲೆನಾಡ ಬೆಟ್ಟದ ಕೆಳಗೆ ಇಳಿಯ ಲಿಲ್ಲ. ಬಯಲುನಾಡು ನಿಜಾಮರಾಜ್ಯದ ಕಲ್ಯಾಣ ಕಲಬುರ್ಗಿಯವರೆಗೂ ಸಾಗಿಹೋಗಿದೆ. ಈ ಎರಡೂ ಭಾಗಗಳಲ್ಲಿ ಜನಜೀವನವು ತರತರಂಗಗಳಲ್ಲಿ ಬೇರೆಬೇರೆಯಾಗಿ ಒಡೆದು ಕಾಣಲು ಮಲೆನಾಡನ್ನು ಬೆಟ್ಟದ ಕೆಳಗೆ, ಬೆಟ್ಟದ ಮೇಲೆ, ಹಾಗೂ ಗಡಿನಾಡು ಎಂದೂ ಬಯಲು ನಾಡನ್ನು ದೋಣಿಸಾಲು, ಹೊಳೆಸಾಲು, ಬೆಳವಲದ ಮಸಾರೆಯ ಸಾಲು ಹಾಗೂ ಎರೆ ಸ್ವಾಲು ಎಂದೂ ಭಾಗಮಾಡಿಕೊಂಡು ನನ್ನ ನೆದರಿಗೆ ಬಿದ್ದ ಎಲ್ಲ ಹಾಡುಗಳನ್ನು ಸಂಕಲಿಸುತ್ತ

ಬಂದೆ. ಸಂಕಲನವು ಗಾತ್ರದಲ್ಲಿ ಹಿಗ್ಗ ಹೆತ್ತಲು ಅದನ್ನು ಓದಿ ಮನನ ಮಾಡಿ ಹಾಡುತ್ತ ಬಂದ ನನಗೆ ಅದರಲ್ಲಿ ಹುದುಗಿದ ಗೂಢಾರ್ಥವು ಹೊಳೆಯಲು ವಿಮರ್ಶಾತ್ಮಕ ದೃಷ್ಟಿಯೂ ಮೈದೋರಿತು. ಹೀಗಾಗಿ ಜನಪದ ಸಾಹಿತ್ಯವು ಹುಲುನಾಗಿ ಸುಗ್ಗಿಯೇ ನಡೆದಿದೆ.

**ಜೀವನ ಸಾಹಿತ್ಯ :**

ಜೀವನವಿಲ್ಲದ ಸಾಹಿತ್ಯವಲ್ಲ. ಸಾಹಿತ್ಯವಿಲ್ಲದ ಜೀವನವಲ್ಲ. ಒಂದು ಒಂದರಲ್ಲಿ ಒಡಮೂಡಿ ಬಂದಿದೆ. ಇಂದು ಮಾನವನ ಆಶೆ ಆಕಾಂಕ್ಷೆಗಳ ಅರ್ಥ ಸೃಷ್ಟಿಯೇ ಜೀವನ. ಅದರ ಅನುಭವದ ಶಬ್ದ ಸೃಷ್ಟಿಯೇ ಜನಾಂಗಕ್ಕೆ ಸಾಹಿತ್ಯ.ಆದುದರಿಂದ ನಮ್ಮ ಜೀವನವೇ ನಮ್ಮ ಸಾಹಿತ್ಯ. ಅಲ್ಲಿ ಆದದ್ದು ಇಲ್ಲಿ ಒಡಮೂಡಿ ಬಂದಿದೆ. ಅದು ಮಾನವನ ಭಾವಗಳಲ್ಲಿ ಕಾವ್ಯವಾಗಬಹುದು; ನಾಟಕ, ಕಥೆಯಾಗಬಹುದು; ಒರೆಗಲ್ಲಿಗೆ ಹತ್ತಿದ ವಿಮರ್ಶೆಯೂ ಆಗಬಹುದು. ಇಲ್ಲವೆ ಇವೆಲ್ಲವುಗಳನ್ನೊಳಗೊಂಡ ಸತ್ಯಸೌಂದರ್ಯಸುಖದ ಪರಬ್ರಹ್ಮವೇ ಆಗಬಹುದು. ಆದುದರಿಂದ ಅದು ಮಾನವನಿಗೆ ಬೇಕಾಗಿದೆ. ಅಂತೆಯೇ ಸಾಹಿತ್ಯ ವಾಹಿನಿಯು ಯುಗಯುಗಾಂತರಕ್ಕೆ ಹರಿಯುತ್ತ ಬಂದಿದೆ.

**ಜನಪದ ಸಾಹಿತ್ಯದಲ್ಲಿ :**

ಸಾಹಿತ್ಯವು ಸಹಜವಾಗಿದ್ದರೆ ಅದು ಸತ್ಯಸುಂದರವಾಗುವುದು. ಯುಗ ಯುಗಕ್ಕೂ ಅದು ಅಚ್ಚಳಿಯದೆ ಉಳಿದು ತನ್ನ ಪ್ರಭಾವವನ್ನು ಸಂಸ್ಕೃತಿಯ ಮೇಲೆ ಬೀರುತ್ತ ಬರುವುದು. ಇಂತಹ ಅಂತಃಸ್ಫೂರ್ತಿಯು ಜನಪದ ಸಾಹಿತ್ಯದಲ್ಲಿ ತುಂಬ ಹರಿದಾಡುತ್ತಿರುವುದು. ನಮ್ಮ ಜನಜೀವನವು ತುಂಬ ಬಿಂಬಿತವಾದುದು ಜನಪದ ಸಾಹಿತ್ಯದಲ್ಲಿ. ಕರ್ನಾಟಕದಲ್ಲಿ ಜನಪದ ಸಾಹಿತ್ಯವು ಬಹು ಸುಖವಾಗಿ ಬೆಳೆದು ಬಂದಿದೆ. ಬೀಸುವ ಹಾಡು, ಒನಕೆಯ ಹಾಡು, ಬೆಳದಿಂಗಳಲ್ಲಿ ಕೋಲ ಹಾಡು, ಹೋಳಿಯ ಹಾಡು, ಮಕ್ಕಳಾಟದ ಹಾಡು, ಸುಗ್ಗಿಯಲ್ಲಿ ಹಂತಿಯ ಹಾಡು, ಸಮುದ್ರ ತೀರದಲ್ಲಿ ಡೋಣಿಯ ಹಾಡು, ಜಾತ್ರೆ ಮಹೋತ್ಸವಗಳಲ್ಲಿ ಲಾವಣಿ ಹಾಡು, ಪರಸಿಗಳಲ್ಲಿ ದುಂದುಮೆ ಹಾಗೂ ದುಂದುಭಿ ಹಾಡು, ಹಲಕೆಲವು ಹಬ್ಬ ಹುಣ್ಣಿವೆಗಳಲ್ಲಿ ಗೊಂದಲಿಗರ ಗೊಂದಲ ಹಾಡು, ಹೆಣ್ಣುಮಕ್ಕಳ ಗೌರಿಶೀಗೆಯ ಹಾಡು, ಲಗ್ನ ಮುಹೂರ್ತಗಳಲ್ಲಿ ಸೋಬಾನ ಹಾಡು, ಶಿವರಾತ್ರಿ ಯುಗಾದಿಗಳಲ್ಲಿ ಕಂಬಿಯ ಹಾಡು,

ಪುಣ್ಯತಿಥಿಗಳಲ್ಲಿ, ವಿಶೇಷವಾಗಿ ಶ್ರಾವಣ ಮಾಸದಲ್ಲಿ ಹಳ್ಳಿಯ ಹೆಂಗದೆಯರು ಅನೇಕ ದಿನಗಳವರೆಗೆ ಹಾಡುವ ಶಿವಶರಣರ ಹಾಡು, ಎಲ್ಲಮ್ಮನ ಹಾಡು, ಮೈಲಾರಲಿಂಗನ ಹಾಡು, ಮೋಹರಮ್ಮದಲ್ಲಿ ಕರ್ಬಲ ಪದಗಳು, ರಾಮಾಯಣ, ಮಹಾಭಾರತ ಇವೇ ಮೊದಲಾದವುಗಳನ್ನು ನಾವು ಕಾಣಬಹುದು. ಇದು ಬಲು ಹುಲುಸಾದ ಸಾಹಿತ್ಯ. ಕರ್ನಾಟಕದ ತುಂಬೆಲ್ಲ ರಾಶಿರಾಶಿಯಾಗಿ ಕೇಳಬರುತ್ತಿದೆ. ಇದರ ಕಾಲಮಾನವನ್ನು ಅಳೆಯುವುದು ಅಸಾಧ್ಯ. ಇದು ಜನಾಂಗದೊಡನೆ ಹುಟ್ಟಿ ಒಂದೇ ಸವನೆ ಹರಿದುಬಂದಿದೆ ಎಂದು ಹೇಳಬಹುದು.

**ಜನತಾ ಗೀತೆಗಳು :**

ಈ "ಜನತಾ ಗೀತೆಗಳ"ಲ್ಲಿ ಸಂಪ್ರದಾಯ ಹಾಡುಗಳೂ ಹಂತಿಯ ಹಾಡುಗಳೂ ಹೋಳಿಯ ಹಾಡುಗಳೂ, ಬೀಸುವ ಹಾಡುಗಳೂ ಇತರ ಹಾಡುಗಳೂ ಇವೆ. ಜನಪದವು ಸಂಪ್ರದಾಯಗಳನ್ನು ಅಂಥ ಶ್ರದ್ಧೆಯಿಂದ ನಂಬಿಕೊಂಡು ಬಂದಿದೆ; ಕಾಲಕಾಲಕ್ಕೆ ಅವುಗಳನ್ನು ಆಚರಿಸಿ ಪೀಳಿಗೆಗೆ ತಾ ತಂದ 'ಚ್ಯಾಜ' ವೆಂದು ಕೊಡುತ್ತ ಬಂದಿದೆ. ಅಂತೆಯೇ ಈ ಸಂಪ್ರದಾಯಗಳ ಅರ್ಥಗಳು ತಿಳಿಯದಿದ್ದರೂ ನಮಗಿಂದು ಉಳಿದು ಬಂದಿವೆ.

**ಸಂಪ್ರದಾಯದ ಐಸಿರಿ :**

ಬನ್ನಿಯ ಹಬ್ಬವು ಕನ್ನಡಿಗರಿಗೆ ನಾಡಹಬ್ಬ. ಅಂದು ಅವರು ನಾಡದೇವಿಯ ತೇರನ್ನು ಸಿಂಗರಿಸಿ ಎಳೆಯುವರು. ಬನ್ನಿಯ ಮುಡಿಯುವುದೆಂದರೆ ಕಾಡ ಸಂಪತ್ತನ್ನು ನಾಡಿಗೆ ತರುವುದು. ಒಕ್ಕಲಿಗನು ಬೆಳೆದ ಬೆಳಸಿಗೆ ಬನ್ನಿಯ ಮುಡಿಯುತ್ತಾನೆ; ಭೂತಾಯಿಗೂ ಬನ್ನಿಯ ಮುಡಿಯುತ್ತಾನೆ. ಅವನಿಗೆ ಅರಸನೆಂಬ ಭಕ್ತಿಯಿದೆ. ದೇವರೆಂಬ ಜ್ಞಾನವಿದೆ, ಅವನ ದೃಷ್ಟಿಯಲ್ಲಿ ದೇವದೇವರೂ ಬನ್ನಿಯ ಮುಡಿಯುತ್ತಾರೆ; ದೈವಸಂಕಲ್ಪವೂ ಬನ್ನಿಯ ಮುಡಿಯುತ್ತಿದೆ. ಮಕ್ಕಳು ಹಡದವರಿಗೆ ಬನ್ನಿಯ ಮುಡಿಯುವುದು, ಹೆಂಡತಿಯು ಗಂಡನಿಗೆ ಬನ್ನಿಯ ಮುಡಿಯುವುದು ಅವರವರ ಧರ್ಮ. ಕನ್ನಡ 'ಗುಜ್ಜ'ಯರು ವೇಷಭೂಷಿತರಾಗಿ ಥಿಲಥಿಲಸಿ ಕುಣಿಯುವುದು ಹೇವ ಮರೆತು ಒಕ್ಕಟ್ಟಿನಿಂದಿರಲು ಕನ್ನಡ ಕುಲಕ್ಕೆ ಈ ಹಾಡಿನಲ್ಲಿ ದಿವ್ಯಸಂದೇಶವಿದೆ.

ಇಂದು ಮುಡಿಯುವ ಬನ್ನಿ ಮುಂದೆಮಗ ಹೊನ್ನಾಗಿ
ಕುಂದಣದಾರೂತಿ ಬೆಳಗುದಕ || ಕೋಲು ಕೋಲ ||

ಕನ್ನಡಿಗರು ಮುಡಿಯುವ ಕನ್ನಡ ಗಡಿಗಳ ಬನ್ನಿಯ ಪತ್ರಿ ನಾಡ ಹೊನ್ನಾಗಿ ಕನ್ನಡಿಗರು ಕುಂದಣದಾರುತಿಯನ್ನು ಬೆಳಗಲೆಂದು !

ನಾಗರ ಪಂಚಮಿ, ಗೌರಿಸೀಗೆ, ಅರಳೆಲೆ ಬಸವ ಮೊದಲಾದವುಗಳು ಹೆಣ್ಣಿನ ಹಬ್ಬಗಳು. ಹೆಂಣು ಅಂದು ಮಂಣು ಪೂಜೆಯ ಮಾಡಿ ಭೂತಾಯಿಗೆ ಸುಖಸಂಪತ್ತನ್ನೀಯಲು ಬೇಡಿಕೊಳ್ಳುವ ದಿನ. ಗಂಡನ ಮನೆಗೆ ಹೊಸದಾಗಿ ಬಂದ ಹೆಂಣು ಈ ಹಬ್ಬ ಬರಲು ತವರನ್ನು ನೆನಸಿ ತವರಮನೆ ಸೇರುವುದು. 'ಪಂಚಮಿ ಬರಲೆವ್ವ ಮಂಚ ಕಟ್ಟಲಿ ಮನೆಗೆ' ಎಂದು ಹೆಂಣು ಮರುವರುಷ ಪಂಚಮಿ ಬರಲೆಂದು ಹಾರೈಸುತ್ತಿತ್ತಿದೆ. ಹೆಂಣುಸಿಂಗಾರಾಗಿ ಸಡಗರದಿಂದ ನಾಗಪ್ಪನಿಗೆ ಹಾಲು ಹೊಯ್ದು ಸುಖ ಭೋಜನ ಮಾಡಿ ಗೆಳತಿಯರೊಡನೆ ಹಾಡುತ್ತ ಜೋಕಾಲಿ ಜೀಕುವುದು.

ಗಂಡನ ಮನಿಯಾನ ಕಂಡ ಬಾಳುವೆ ಹಾಡಿ
ಉಂಡು ಓಡ್ಯಾಡಿ ಆಡೋಣ | ಮನೆಮಾತ
ಹಿಂಡಿನಾಗಾಡಿ ಮರೆಯೋಣ ||

ಎಂಬ ಪದ್ಯವಂತೂ ಗಂಡನ ಮನೆಯಲ್ಲಿ ನಡೆದ ಬಂದ ಹೆಂಣು ಆ ಮನೆಯ ಸುಖ ದುಃಖವನ್ನು ತವರೂರ ಗೆಳತಿಯರೊಡನೆ ಜೀಕವಾಡಿ ಹಾಡಿ ಮನವನ್ನು ಹಗುರು ಮಾಡಿಕೊಂಡು ಮತ್ತೆ ಪ್ರಪಂಚ ಮಾಡಲು ಹೊಸಬಳಾಗುವಳೆಂದು ಸೂಚಿಸುತ್ತದೆ. ಪಂಚಮಿಗೆ ಬಂದ ಹೆಂಣು ಅರಳೆಲೆ ಬಸವನ ತಂದು ಕೋಟಿ ಕಟ್ಟಿ ಕೋಲು ಹಾಕಿ ಬಸವನ ಗುಣಗಾನ ಮಾಡುವುದು. ಸೀಗೆಯನ್ನಿಟ್ಟು ಬನದೂಟ ಮಾಡಿ ಹಿಟ್ಟು ಚೆಲ್ಲಿದ ಬೆಳದಿಂಗಳದಲ್ಲಿ ಅಡಿ ಹಾಡಿ ತವರ ಮನೆಯ ದೀಪ ಹೆಚ್ಚಳವಾಗಲೆಂದು ಹೆಂಣು ಆರುತಿಯೆತ್ತುವುದು.

ಗುರ್ಚಿ ಜೋಕಮಾರರು ಕನ್ನಡಿಗರಿಗೆ ಮಳೆ ತರುವ ಸಂಪ್ರದಾಯ ದೇವತೆಗಳಾಗಿವೆ. ಗುರ್ಚಿಯು 'ಗುರುಸಿದ್ಧ' ಎಂಬ ಶಬ್ದದ ವಿಕೃತರೂಪ. ಈ ಗುರುಸಿದ್ಧನೇ "ಎರೆಗಂಬಳಿ ಮಠದ ಗುರುಸಿದ್ಧಲಿಂಗ ಯತಿ"ಯೆಂದು ಸಂಶೋಧನೆಯಿಂದ ತೋರಿಸಲಾಗಿದೆ. ಈ ವಿರಕ್ತನು ೧೪ನೆಯ ಶತಮಾನದಲ್ಲಿ ಕರ್ನಾಟಕದಲ್ಲಿಯೇ ಆಗಿಹೋದನು. ಈ ಗುರುಸಿದ್ಧಲಿಂಗ ಯತಿಯು ಮುಪ್ಪಿನ ಷಡಕ್ಷರಿಯ ಗುರುಕುಲದ ಮೂಲ ಪುರುಷನೆಂದು ತಿಳಿದು ಬರುವುದು. ಈ ವಿರಕ್ತನ ಕಾಲದಲ್ಲಿ ಕರ್ನಾಟಕಕ್ಕೆ ಬರ ಬೀಳಲು ಜನರ ಗೋಳಾಟವನ್ನು

ನೋಡದೆ ಕನಿಕರಪಟ್ಟು ಈ ಎರಗಂಬಳಿಮಠದ ಗುರುಸಿದ್ಧಲಿಂಗನು ತಾನು ಹೊದ್ದುಕೊಂಡ ಕರೆಗಂಬಳಿಯನ್ನು ಬೀಸಲು ಮೋಡಿಲ್ಲದ ಮಳೆ ಬಂದು ನಾಡು ಸುಖಸಂಪತ್ತಿನಿಂದ ತುಂಬಿಹೋಯಿತು. ಜನರು ಈ ವಿರಕ್ತನನ್ನು ಭಕ್ತಿಯಿಂದ ಹಾಡಿ ಕೊಂಡಾಡಿದರು. ಅವನ ಮರಣದ ನಂತರ ಮಳೆಯಾಗದಿರಲು ಲಿಂಗದಾಕೃತಿಯನ್ನು ಮಾಡಿ ಅದರ ನೆತ್ತಿಯಲ್ಲಿ ಕರಕಿಯ ಪತ್ರಿಯನ್ನಿಟ್ಟು ಗುರುಸಿದ್ಧಲಿಂಗವೆಂದು ಅವನ ಸ್ಮಾರಕವನ್ನು ಮಾಡಹತ್ತಿದರು ಮುಂದೆ ಈ ಸ್ಮಾರಕವು ಸಂಪ್ರದಾಯವಾಗಿ ಜನಪದದಲ್ಲಿ ಬಂದಿದೆ. ಇಂದು, ಗುರ್ಜಿಯು ಮಳೆ ಹೋಗಲು, ಕನ್ನಡ ಗಡಿಗಳಲ್ಲಿ ತಿರುಗಾಡುವುದು ಎಲ್ಲರ ನಿದರ್ಶನಕ್ಕೆ ಬಂದರೆ ಸಾಕು. ಈ ಸಂಪ್ರದಾಯ ಮಠಗಳು ಕರ್ನಾಟಕದ ತುಂಬೆಲ್ಲ ಈಗಲೂ ಕಂಡು ಬರುವುವು.

ಜೋಕುಮಾರನು ಕನ್ನಡಿಗರ ಸಂಪ್ರದಾಯ. ಒಕ್ಕಲಿಗನು ಜೋಕುಮಾರನ ಪೂಜೆಯನ್ನು ಮಂಗಳ ಪೂಜೆಯೆಂದು ನಂಬುತ್ತಾನೆ. ಜೋಕುಮಾರನು ವಿಷ್ಣಾದೇವಿಯ ಮಗನೆಂದೂ, ಅಷ್ಟಮಿಯ ಕೊಡದಲ್ಲಿ ಜನಿಸಿದನೆಂದೂ ಜೋಕುಮಾರನ ಹಾಡಿನಲ್ಲಿ ಬರುವುದು. ಜೋಕುಮಾರನ ಅಳಕ ಅಂಬಲಿಯೇ ಒಕ್ಕಲಿಗನು ತನ್ನ ಬೆಳಸಿಗೆ ಒಗೆಯುವ ಮೊದಲನೆಯ ಚೆರಗ.

ಜೋಕುಮಾರ ಹುಟ್ಟಲಿ ಲೋಕವು ಬೆಳೆಯಲಿ
ಆಕಳ ಹಾಲ ಕರೆಯಲಿ | ಹರಿಯಾಗ
ಕಾತೆದ್ದು ಮಸರ ಕಡೆಯಲಿ ||

ಜೋಕುಮಾರನು ಹುಟ್ಟೆ ಲೋಕೆಲ್ಲ ಬೆಳಸಾಗಲೆಂದೇ ಒಕ್ಕಲಿಗನ ಹಿರಿಯಾಸೆ. ಜೋಕುಮಾರನು ನಾಡ ಪಟಿಂಗನಂತೆ. ಹುಟ್ಟಿದ ಏಳು ದಿನಗಳಲ್ಲಿ ಊರೆಲ್ಲ ಕಳುವಾಡಲು ಜನರು ಅವನ ತಲೆ ಹೊಡೆದು ಅಗಸರ ಕಲ್ಲ ಬುಡದಲ್ಲಿ ಇಟ್ಟರೆಂದು ಒಂದು ಜಾನಪದ ಕಥೆಯೂ ಬರುವುದು. ಜೋಕುಮಾರನ ತಲೆಯನ್ನು ಹೊಡೆಯುವಾಗ ಅವನು ಉಂಡದ್ದು ಅಂಬಲಿಯಾಗಿ ಸೂರಾಡಲು ಭೂಮಿ ಭೂಮೆಲ್ಲ ಬೆಳೆ ಬಂದಿತಂತೆ ! ಕೋಲ್ಮಿಂಚು ಕಾರ್ಮುಗಿಳೆಯು ಸುರಿದು ಗುಡ್ಡಗಳೇ ಹೈನಾದವಂತೆ ! ಒಕ್ಕಲಿಗನ ಸೆಡ್ಡೆಯ ಮೇಲೆ ಸಿರಿ ಬರಲು ಅವನು ಜೋಕುಮಾರನನ್ನು ಹೇಗೆ ಮರೆಯಬೇಕು ? ಅಂತೆಯೇ ಜನಪದವು ಅವನ ಸಂಪ್ರದಾಯವನ್ನು ಆಚರಿಸುತ್ತ ಬಂದಿದೆ. ಜೋಕುಮಾ

ರನ ಪ್ರಭಾವವನ್ನು ಕಂಡ ಒಕ್ಕಲಿಗನು ಅವನಿಗೆ ಅಂಬಲಿಯುಣಿಸಿ ಅವನ ಹೆಸರಿಲೆ ಬೆಳೆಗ್ಗೆ ಅಂಬಲಿಯನ್ನು ಸೂರಾಡಿ ಬೆಳಸು ಹುಲುಸಾಗಲೆಂದು ಬೇಡಿ ಕೊಳ್ಳುವನು. ಜೋಕುಮಾರನು ಹುಟ್ಟಿ ಸಾಯುವದರೊಳಗಾಗಲಿ, ಸತ್ತ ಮೇಲಾಗಲಿ ಮುಂಗಾರಿಯ ದೊಡ್ಡ ಮಳೆಗಳು ಕೂಡಿ ಮಳೆಯಾಗುವುದು ಇದೆಲ್ಲವೂ ಜೋಕುಮಾರನ ಫಲವೆಂದು ನಂಬಿ ಜನಪದವು ಅವನನ್ನು ಆದರ ದಿಂದ ಬರಮಾಡಿಕೊಳ್ಳುತ್ತದೆ.

**ಸುಗ್ಗಿಯ ಸಗ್ಗದಲ್ಲಿ :**

ಮೈಮುರಿದು ದುಡಿದ ಒಕ್ಕಲಿಗನಿಗೆ ಸುಗ್ಗಿಯು ಒಂದು ಹಿಗ್ಗಿನ ದಿನ. ಹೌಸು ಹುಮ್ಮಸಗಳ ರೆಕ್ಕೆಗಳನ್ನು ಬಿಗಿದುಕೊಂಡು ರಸಖುಷಿಯಾಗಿ ಅವನು ತನ್ನ ಬೇಸಾಯದ ಗುಂಗಾನಗೈಯುತ್ತ ಆ ದಿನ ಇರುಳೆಲ್ಲ ಸೊಗಸಿನಲ್ಲಿಯೇ ತೇಲಾಡುವನು. ಅವನ ಹಂತಿಯ ಹಾಡುಗಳು ಅವನ ತೇದುಂಡ ಜೀವನದ ಬಿರಿದ ಮೊಗ್ಗುಗಳು. ಅವುಗಳಲ್ಲಿ ಕೃಷಿಕರ್ಮದ ಅನುಭಾವದ ಬಿಡಿನುಡಿ ಗಳಿವೆ; ಬಸವೇಶ, ಸಂಗಮೇಶ, ಮಲ್ಲಿಕಾರ್ಜುನ ಮೊದಲ ದ ದೇವದೇವತೆಗಳ ಸ್ತುತಿಸ್ತವನಗಳಿವೆ; ಸುಗ್ಗಿಯ ಸಂಪ್ರದಾಯಗಳನ್ನೊಳಗೊಂಡ ನೂರೊಂದ ಶಿವಶರಣರ ಮಾರುದ್ದ ಹಾಡುಗಳೂ ಇವೆ; ಕನ್ನಡ ವೀರಗಲಿಗಳ ಐತಿಹಾಸಿಕ ಪ್ರಸಂಗಗಳೂ ಇವೆ.

ಒಕ್ಕಲಿಗನಿಗೆ ದೇವರು ಅನಂತಕೋಟಿ. ಅವುಗಳಲ್ಲಿ ಅವನಿಗೆ ಹೆಚ್ಚಿನ ದೇವರೆಂದರೆ ಮಹಾದೇವ; ಮೆಚ್ಚಿನ ದೇವರೆಂದರೆ ಬಸವಂಣ ಮಹಾದೇವನಿಗೆ ಶಿವನೆಂದೂ ಮುಕ್ಕಣ್ಣನೆಂದೂ ಶಿವಲಿಂಗವೆಂದೂ ಬೇರೆ ಬೇರೆ ಹೆಸರಿಟ್ಟು ಭಕ್ತಿ ಯಿಂದ ಸ್ತುತಿಸಿದ್ದಾನೆ.

ಶಿವಶಿವ ಎಂದಾರ ಸಿಡಿಲೆಲ್ಲ ಬಯಲಾಗಿ
ಕಲ್ಲ ಬಂಡೆರಗಿ ಕಡೆಗಾಗಿ । ಎಲೆ ಮನವ
ಶಿವನೆಂಬ ಸಬುದ ಬಿಡಬ್ಯಾಡ ||

ಎಂದು ಶಿವನನ್ನು ನೆನೆಯೆಂದು ಜನತೆಗೆ ಹಾಡಿದ್ದಾನೆ. ಅವನಿಗೆ ಬೂದನು ಸುಗ್ಗಿಯಲಿಂಗಯ್ಯ;ಬುದ್ಧಿವಂತಲಿಂಗ; ಅಲ್ಲಮಪ್ರಭುದೇವರು. ಅವನ ಬೇಸಾಯದಲ್ಲಿ ಗಣಪತಿಗೆ ಸ್ಥಾನವಿಲ್ಲ.

ಹಂತಿಪದಕೊಂದಿಲ್ಲ ನಿಂತು ಬೆನಕನ ಪೂಜೆ
ಹಂತಿಯೊಳು ಪೂಜೆ ಶರಣರಿಗೆ | ಒಕ್ಕಲಿಗ
ಸ್ವಂತ ನೆನೆಯೆಂದ ಗಣಪನಿಗೆ ||

ಎಂದು ಹಾಡಿ ಬೆನಕನನ್ನು ನಿರಾಕರಿಸಿ ಸುಗ್ಗಿಯಲ್ಲಿ ಶಿವಶರಣರನ್ನು ಬರಮಾಡಿಕೊಂಡಿದ್ದಾನೆ.

ಬಸವಂಣನಿಂದಲೇ ಒಕ್ಕಲುತನವೆಂದರಿತ ಅವನು ಆವನ ಹಿರಿಮೆಯನ್ನು ಕೊಂಡಾಡಿ ಗುಣಗಾನ ಮಾಡಿದ್ದಾನೆ.

ಭೂಮಿ ಹುಟ್ಟಿದ ಮೊದಲು ಭೂಮಿ ಕಟ್ಟಿದ ಮೊದಲು
ಭೂಪ ಹುಟ್ಟೇದ ಬಸವಯ್ಯ | ಮ್ಯಾಗೀನ
ಶಿವಗೇಳು ದಿನಕ ಹಿರಿಯಾನ ||

ಎಂದು ಹಾಡಿ ಬಸವಂಣನು ಶಿವನಿಗಿಂತಲೂ ಏಳು ದಿವಸ ಹಿರಿಯನೆಂದು ಜಗತ್ತಿಗೆ ಸಾರಿದ್ದಾನೆ. ಒಕ್ಕಲಿಗರಾದ ಅನೇಕ ಶಿವಶರಣರು ಈ ಹಾಡುಗಳನ್ನು ರಚಿಸಿ ಹಾಡುತ್ತ ಬಂದುದರಿಂದ ಈ ಬಿಡಿ ಪದ್ಯಗಳಲ್ಲಿ ಕಲ್ಯಾಣ ಬಸವನೂ ಧ್ವನಿತನಾಗುತ್ತಾನೆ. ಸಂಗಮೇಶ, ಮಲ್ಲಿಕಾರ್ಜುನ ಮೊದಲಾದ ಹಾಡುಗಳಲ್ಲಿ ಅವನ ಉಪವಾಸ, ಬೇಡಿಕೆ, ಹರಕೆ ಮೊದಲಾದವುಗಳ ಬಂಣನೆಯನ್ನು ಕಾಣಬಹುದು. "ಸಂಗಮುಕ ಹೋಗಾಕ ಸಂಗಾಟ ಮಗಬೇಕ" "ಪುಂಡ ಪರವುತಮಲ್ಲ ಗಂಡ ಮಗನಕೊಡು" ಮೊದಲಾದವುಗಳು ಅವನು ಕೈ ಮುಗಿದುಕೊಂಡು ಬೇಡಿಕೊಳ್ಳುವ ವಚನಗಳಾಗಿವೆ.

ರಾಜನಿಷ್ಠನಾಗಿ, ದೇಶಭಕ್ತನಾಗಿ ಬಾಳಿದ ಒಕ್ಕಲಿಗನು ಕನ್ನಡ ಕಲಿಗಳ ದುರಂತವನ್ನು ಕೇಳಿ ನಿಸ್ಸಹಾಯಕನಾಗಿ ಕಳವಳಪಟ್ಟಿದ್ದಾನೆ; ಪ್ರಸಂಗವು ಕೈಮೀರಲು ಕಂಣೀರು ಹರಿಸಿದ್ದಾನೆ. ಕಂಪಲಿ, ವಿಜಯನಗರ, ಕಿತ್ತೂರು, ನರಗುಂದ ಮೊದಲಾದ ರಾಜ್ಯಗಳ ಐತಿಹಾಸಿಕ ಪ್ರಸಂಗಗಳನ್ನು ಮುಚ್ಚುಮರೆ ಮಾಡದೆ ಸತ್ಯವನ್ನೇ ಬಿಚ್ಚಿ ಹಾಡಿದ್ದಾನೆ. ಕಂಪಲಿ ವಿಜಯನಗರಗಳು ಹಾಳಾದ ದುರಂತವು ಇಂದಿನ ಕನ್ನಡಿಗರಿಗೆ ಭೀಕರವಾಗಿದೆ; ಭೀಭತ್ಸವಾಗಿದೆ. ಖಾನರ ಬೆನ್ನು ಹತ್ತಿ ಕೊಂಕಣದ ಮಾದರ ಮಾತಂಗಿಯ ಒಳಸಂಚು ಹೇಯಾಸ್ಪದವಾಗಿದೆ. ಕಲಿಕುಮಾರರಾಮನ ಮರಣವು ಕನ್ನಡಿಗರಿಗೆ ವೀರ

ಸ್ವರ್ಗದ ಮಾತಾಗಿದೆ. ಆ ಗಂಡಗಲಿ ಕುಮಾರರಾಮನು ಇಂದು ಹಳ್ಳಿಗರ ನುಡಿಯಲ್ಲಿ 'ಕೊಮರಾಮ'ನಾಗಿ ಉಳಿದಿದ್ದಾನೆ.

ವಿಜಯನಗರ ರಾಜ್ಯವನ್ನು ಕಟ್ಟಿದ ದಿನವು ಬನ್ನಿಯ ಹಬ್ಬದ ದಿನವೆಂದೂ 'ವಿಜಯದಶಮಿ'ಯ ದಿವಸ ಸ್ಥಾಪಿತವಾದ ಆ ಪಟ್ಟಣಕ್ಕೆ ವಿಜಯನಗರವೆಂದು ಕರೆದರೆಂದೂ ಹಾಡಿನಲ್ಲಿ ಧ್ವನಿತವಾಗಿ ಬಂದಿದೆ. ಹಂಪೆಯ ವಿರೂಪಾಕ್ಷನು ವರ ಕೊಡಲು ಹುಕ್ಕಬುಕ್ಕರೂ ಬನ್ನಾಣ (ಬಲ್ಲಾಳ) ವೀರರೂ ವಿಜಯನಗರ ರಾಜ್ಯವನ್ನು ಸ್ಥಾಪಿಸಿದರೆಂದೂ ಲಕ್ಕಣ ದಂಡೇಶ, ಹಾಗೂ ಜಕ್ಕಣಾಚಾರ್ಯರು ಪ್ರೌಢರಾಯನ ಕಾಲದಲ್ಲಿ ಈ ರಾಜ್ಯವನ್ನು ಬೆಳಸಿದರೆಂದೂ ಒರುವುದು. ಪಂಚಶಾಹಿಗಳೇ ವಿಜಯನಗರ ರಾಜ್ಯವನ್ನು ನುಂಗಿ ನೀರು ಕುಡಿದರೆಂದು ಒಕ್ಕಲಿಗನು ಕಳವಳಪಟ್ಟಿದ್ದಾನೆ.

ಕಿತ್ತೂರ ದುರಂತವು ಈ ಹಂತಿಯ ಹಾಡುಗಳಲ್ಲಿ ಎಂದಿಗೂ ಮಾಸದ ಚಿತ್ರವಾಗಿದೆ. ಕೇವಲ ನಾಲ್ವತ್ತೆರಡು ಪದ್ಯಗಳಲ್ಲಿ ಇಡಿ ಕಿತ್ತೂರ ರಾಜ್ಯದ ಇತಿಹಾಸವನ್ನು ಓದುಗರು ಅರಿತುಕೊಳ್ಳಬಹುದು. ಮುತ್ತು ಮಾಣಿಕದ ಕಣಜಾದ ಕಿತ್ತೂರು ಹಾಳಾಗಲು ಬಂದ ಸಂಕಟಗಳನ್ನು ಒಕ್ಕಲಿಗನು ಬಲು ಮಾರ್ಮಿಕವಾಗಿ ಹೇಳಿದ್ದಾನೆ. ಕನ್ನೂರ ಕಲ್ಲೂರ ಮಲ್ಲರ ಪಿತೂರಿಯಾಗಲು ಧಾರವಾಡ ವೆಂಕಾಟಿಯ ದಾರೆಳಿಲೆ ಶಿರ ಕೊಯ್ದನೆಂದೂ, ಅಮಟೂರ ಬಾಳಪ್ಪನು ಕಿತ್ತೂರ ಕದನದಲ್ಲಿ ಥಾಕರೆಗೆ ಗುಂಡಿಡಲು ಬೆಳಗಾವಿ ಚಿಪ್ಲಿನ್ನನು ಬೆಳಗಾಗುವುದರೊಳಗೆ ಮಸಲತ್ತು ಮಾಡಿ ಕಿತ್ತೂರಿಗೆ ಮುತ್ತಿಗೆ ಹಾಕಿದನೆಂದೂ ಹಾಡಿದ್ದಾನೆ.

ಲದ್ದೀಯ ಗೋವಿಂದ ಕುದ್ದಲಗೇಡ್ಹಾರೂವ
ಮದ್ದಿಽಗೆ ಲದ್ದಿ ಬೆರಿಸ್ಯಾನೊ | ನಸಿಬಾವೊ
ಬಿದ್ದು ಕಿತ್ತೂರು ಹಾಳಾತೊ ||

ಲದ್ದೀ ಗೋವಿಂದನೇ ಕಿತ್ತೂರ ಹಾಳು ಮಾಡಿದನೆಂದೂ ಜಮಖಂಡಿ ದೇಸಾಯಿಯು ಚಿಪ್ಲಿನ್ನನ ದಂಡು ಕೂಡಿ ಕಿತ್ತೂರೈಸಿರಿಯನ್ನು ಸಮನಾಗಿ ಹೊತ್ತೊಯ್ದನೆಂದು ಉಸುರು ಹಾಕಿದ್ದಾನೆ; ಸಂಗೊಳ್ಳಿ ರಾಯಣ್ಣನ ಬಂಡಾಯದಲ್ಲಿಯ ದೇಶದ್ರೋಹಿಗಳನ್ನು ಬಯಲಿಗೆ ಎಳೆದಿದ್ದಾನೆ. ಒಟ್ಟಾರೆ ಇಲ್ಲಿ ಬರುವ ಕಿತ್ತೂರ ರಾಜ್ಯದ ದುರಂತ ಚಿತ್ರವು ಕನಿಕರ ಪಡುವಂತಹದಾಗಿದೆ.

ನರಗುಂದ ದುರಂತಕ್ಕೆ ಹಂತ, ಜೋಯಿಸರೇ ಕಾರಣರೆಂದು ಹಾಡಿ ಅವರಿಗೆ ದೊರೆತ ತಕ್ಕ ಶಾಸನವನ್ನು ಜನತೆಯು ಮುಂದೆ ಒಕ್ಕಲಿಗನು ಇಟ್ಟಿದ್ದಾನೆ. ಕಿತ್ತೂರು ಹಾಳಾಗಲು ಜನತೆಯು ಪಟ್ಟ ಕಳವಳವು ನರಗುಂದ ಹಾಳಾಗಲು ಕಂಡು ಬರುವುದಿಲ್ಲ. ಅಲ್ಲದೆ ನರಗುಂದ ಬಾಬಂಣನಿಗೆ ರಾಜ್ಯ ಹಾಳಾಗಿ ಹೋಗಲೆಂದು ಹೂಲಿ ಸ್ವಾಮಿಗಳ ಶಾಪವಿತ್ತೆಂದು ಹಾಡಿನಲ್ಲಿ ಬರವುದು.

ಹೂಲಿ ಸ್ವಾಮಿಯು ಕೊಟ್ಟ ಕೋಲಮಿಂಚಿನ ಸಾಪ
ಗಾಲಮೇಲಾತು ನರಗುಂದೊ | ಮರುವರುಷ
ಕೂಲಿಕುಂಬಳಿಗೆ ಎರುವಾತೊ ||

ಅದಾವ ಕಾರಣ ಹೂಲಿಸ್ವಾಮಿಯು ಶಾಪಕೊಟ್ಟನೊ ಯಾವುದೂ ತಿಳಿಯದು. ಐತಿಹಾಸಿಕ ದೃಷ್ಟಿಯಿಂದ ಈ ಎಲ್ಲ ಪದ್ಯಗಳು ಬಹಳ ಮಹತ್ವದುವು. ಇವುಗಳೊಳಗಿನ ಇತಿಹಾಸವನ್ನು ಯಾರೂ ಅಲ್ಲಗಳೆಯಲಾರರು.

**ಹೋಳಿಯ ರಂಗರಂಗದಲ್ಲಿ:**

ಹೋಳಿಯು ಗಂಡಿನ ಪಾಲಿಗೆ ಬಂದ ಒಂದೆ ಒಂದು ಹಬ್ಬ. ಹಲ ಕೆಲವು ಭಾಗಗಳಲ್ಲಿ ಹೆಣ್ಣೂ ಈ ಹಬ್ಬದಲ್ಲಿ ಭಾಗವಹಿಸುವುದು. ಹಬ್ಬ ಹುಣ್ಣಿಮೆಗಳಲ್ಲಿ ಹೆಣ್ಣು ಆನಂದಪಡುವುದನ್ನು ಕಂಡು ಗಂಡು ದುಡಿಯುವ ತನಗೆ ಹಬ್ಬವಿಲ್ಲೆಂದು ದೇವರಮುಂದೆ ದೂರಿಕೊಂಡನಂತೆ. ಆಗ ದೇವರು ಆ ದೂರನ್ನು ಕೇಳಿ ಗಂಡು ಒಮ್ಮೆಯಾದರೂ ವರುಷದಲ್ಲಿ ನಕ್ಕಾಡಿ ಪ್ರಪಂಚ ಭಾರವನ್ನು ಮರೆಯಲೆಂದು ಆಡಲು ಹೋಳಿಯನ್ನು ನಿರ್ಮಿಸಿದನೆಂದು ಜನಪದದಲ್ಲಿ ಒಂದು ಕಥೆಯೂ ಬರುವದು. ನಮ್ಮ ಸಂಸ್ಕೃತಿಯಲ್ಲಿ ಹೋಳಿಗೆ ದೊಡ್ಡ ಪರಂಪರೆಯೂ ಪುರಾಣಕಥೆಯೂ ಇವೆ. ಭರತಖಂಡದಲ್ಲಿ ಹಿಂದುಗಳಲ್ಲದೆ ಜೈನರೂ ಬೌದ್ಧರೂ ಹೋಳಿಯನ್ನು ಆಚರಿಸುವರು.

ಹೋಳಿ ಬರುವುದು ಬೇಸಗೆಯಲ್ಲಿ. ಆಗ ಎಲ್ಲರಿಗೂ ಬಿಡುವು. ವಸಂತ ಮಾಸದ ನವಚೈತನ್ಯವು ಉಕ್ಕಿಬರಲು ಮಾನವನು ಮೋಜುಮಜಲುಗಳೊಡನೆ ಸುಳಿದಾಡಹತ್ತುವನು. ಹೋಳಿಹುಣ್ಣಿವೆಯ ದಿವಸ ಕಾಮನ ಸುಂದರವಾದ ಪ್ರತಿಮೆಯನ್ನು ಮಾಡಿಸಿ ಶೃಂಗಾರ ಮಾಡಿ ಊರ ಕಾಮನಕಟ್ಟೆಯ ಚಾವಣೆಯ ಹಂದರದಲ್ಲಿ ಬಲು ಡೌಲಿನಿಂದ ಕಾಮನನ್ನಿಡುವ ವಾಡಿಕೆಯಿದೆ.

ಹಲಕೆಲವು ಭಾಗಗಳಲ್ಲಿ ಕಾಮನ ಎಡಭಾಗಕ್ಕೆ ರತಿದೇವಿಯ ಹೆಣ್ಣುಗೊಂಬೆ ಯನ್ನೂ ಇಡುವರು. ಕೆಲವು ಹಳ್ಳಿಗಳಲ್ಲಿ 'ಸರಕಾರ ಕಾಮು'ನೆಂತಲೂ ದೈವದ ಕಾಮು 'ನೆಂತಲೂ ಕಾಮಣ್ಣನನ್ನಿಡುತ್ತಾರೆ ಪೂರ್ವಕಾಲದಲ್ಲಿ ರಾಜಾಂಗಣದಲ್ಲಿ ಕಾಮನನ್ನಿಟ್ಟು ಆಡುವ ವಾಡಿಕೆಯಿತ್ತು. ಈಗಲೂ ಹಳ್ಳಿ ಗಳಲ್ಲಿರುವ ಸರಕಾರಿ ಕಾಮುನಿಗೆ ಸರಕಾರದಿಂದ ಮಾನಮನ್ನಣೆ ಬರುತ್ತದೆ.

ಕಾಮುನಿಟ್ಟ ಹಂದರದಲ್ಲಿ ಜನರು ತಂಡಿಟ್ಟು ಕೂಡಿ, ಹಾಡಿ ಬಾರಿಸಿ ಆಡುವುದುಂಟು. ಹೋಳಿಯ ಆಟವು ಇಂತಹದೇ ಇರಬೇಕೆಂಬ ನೇಮ ನಿತ್ಯವಿಲ್ಲ. ಅಶ್ಲೀಲ ಅಸಭ್ಯವಾದ ಮಾತುಗಳನ್ನಾಡಿ ಜನರು ಶಾಡಸ್ಥಿತಿಯ ಪ್ರವೃತ್ತಿಗಿಳಿಯುವುದುಂಟು. ಹೋಳಿಯ ಹಾಡುಗಳು ಲಾವಣಿಗಳಿರ ಬಹುದು; ದುಂದುಮೆಗಳಿರಬಹುದು; ದುಂಡುಮಲ್ಲಿಗೆಯ ಸೋಬಾನಗಳಿರ ಬಹುದು; ಕೇವಲ ತ್ರಿಪದಿಯ ಬಿಡಿ ಹಾಡುಗಳೂ ಇರಬಹುದು, ಹೆಜ್ಜೆಯ ಕುಣಿತಗಳಲ್ಲಿರುವುವಲ್ಲದೆ ಕೋಲಿನಲ್ಲಿಯೂ ಕಂಡುಬರುವುವು

ಆನಿಗಂಬರಿಚೆಂದ ಕುದುರಿಗೆ ಥಡಿಚೆಂದ
ಸದರೀಗೆ ಚೆಂದ ಕಾಮಣ್ಣ, ಬಗಲಾಗ
ರೂಪಕ ಚೆಂದ ರತಿದೇವಿ ||

ಹೀಗೆ ಕಾಮನ ಸದರನ್ನು ಹಾಡಿ ಹೋಳಿಯ ಸಂಪ್ರದಾಯವು ಹೇಗೆ ಬಂತೆಂಬುದನ್ನು ಬಲು ಮಾರ್ಮಿಕವಾಗಿ ಹಾಡುತ್ತಾರೆ. ಯಾವ ಕವಿಗಳೇ ಆಗಲಿ ಕಾಮದಹನವನ್ನು ಪೌರಾಣಿಕ ಪರಂಪರೆಗೆ ಶರಣು ಹೋಗಿ ತಮ್ಮ ಕಾವ್ಯಗಳಲಿ ಹಾಡಿದ್ದಾರೆ. ಆದರೆ ಕಾಮದಹನವು ಜನಪದ ಸಾಹಿತ್ಯದಲ್ಲಿ ಪ್ರಪಂಚದ ಮಾತಾಗಿದೆ. ಕೂಡಿದ ಸಭೆಯಲ್ಲಿ ಶಿವನು ಚೆಲುವನಾರೆಂದು ಸವಾಲು ಹಾಕಲು ಏಕೋಭಾವದಿಂದ ಪಾರ್ವತಿಯು 'ತೀರ ಚೆಲುವನು ಕಾಮಣ್ಣ"ನೆಂದೆನಲು ಶಿವನು ಸಿಟ್ಟಿಗೆದ್ದು ಕಾಮನನ್ನು ಸುಟ್ಟನೆಂದು ಹಾಡಿ ನಲ್ಲಿ ಬರುವುದು. ಕಾಮದಹನವು ಪುರಾಣದಲ್ಲಿ ಅಸಂಬದ್ಧ, ಅಸಮಂಜಸ ಕಾಣದಿದ್ದರೂ ಅದರಲ್ಲಿ ಮಾನವೀಯತೆ ಕಂಡುಬರುವುದಿಲ್ಲ. ಆದರೆ ಜನಪದ ಕಾಮದಹನವು ಮಾನವ ಮನೋವ್ಯಾಪಾರಗಳ ಪರಿಜ್ಞಾನದ ಪ್ರತಿಬಿಂಬ ವಾಗಿದೆ. ಅಂದಮೇಲೆ ಜನಸಾಮಾನ್ಯವು ಅದಕ್ಕೆ ತಲೆದೂಗದಿರುವುದೇ?

ಜೀವನದ ತಿಕ್ಕಾಟ ಮುಕ್ಕಾಟಗಳಲ್ಲಿ ಮಾನವನಿಗೆ ಶೃಂಗಾರವು ಸಿಂಪಿನಲ್ಲಿದ್ದ ಮುತ್ತಿನಂತೆ. ಪ್ರಣಯಿಗಳಿಗೆ ಶೃಂಗಾರದಲ್ಲಿ ಉಚ್ಚ ತುಚ್ಛ ಭೇದಗಳೇ ಇಲ್ಲ. ಹೋಳಿಯ ಹಾಡುಗಳಲ್ಲಿ ಅಲ್ಲಲ್ಲಿ ಹಲಕೆಲವು ಅಶ್ಲೀಲ ಶಬ್ದಗಳು ಬಂದರೂ ಶಬ್ದಗಳ ಚಣತ್ಕಾರ ರಾಗದೊಂದಿಗೆ ಶೃಂಗಾರರಸವು ಪುಟಿಪುಟಿದು ಬಲು ಹಿತಮಿತವಾಗಿ ಸುತ್ತಲೂ ಸೂನಾಡಿದೆ. ಅಂತೆಯೇ ರಸಿಕರೆಲ್ಲರೂ ಅವು ಅಶ್ಲೀಲವೆಂದು ಗಣಿಸಕೂಡದು. ಆದುದರಿಂದ ದುಂದುಮೆಯಾಗಲಿ, ದುಂಡುಮಲ್ಲಿಗೆಯಾಗಲಿ, ಹೋಳಿಯ ಬಿಡಿ ಪದ್ಯಗಳಾಗಲಿ ಇಂತಹ ಶಬ್ದಗಳನ್ನೊಳಗೊಂಡಿರುವುದು ಸಹಜವಾಗಿದೆ.

ಹೋಳಿಯಾಡದ ನಾಡು ನಾಳೆನದಿ ಕಾಡಾತು
ಗೋಳಾತೊ ಜನಕ ಮೂಲಾತೊ ಮಳೆಹೋಗಿ
ಹಾಳಾತೊ ಪಿಡಗೆದ್ದು ದಿನದಿನಕೊ ||

ಇದೇ ಜನಪದಕ್ಕೆ ಹೋಳಿಯ ಹಬ್ಬದ ದಿವ್ಯ ಸಂದೇಶ. ಅಂತೆಯೇ ಜನಪದವು ಹೋಳಿಯನ್ನು ತಪ್ಪದೇ ಆಚರಿಸುತ್ತ ಬಂದಿದೆ.

**ಗರತಿಯರ ರಾಗರಾಗಿಣಿಗಳು :**

ಹಾಡುವುದು ಹೆಂಣಿಗೆ ನಿಸರ್ಗದ ದೇಣಿಗೆ. ಅವಳು ನಿತ್ಯ ಹಾಡುವುದು ಬೀಸುವಾಗ; ಕುಟ್ಟುವಾಗ. ಅವಳ ಬೀಸುವ ಹಾಡುಗಳು ಬಾಳಿನ ಸುಖ ದುಃಖದ ತಿರುಳು; ಲೋಕದ ಹೆಣ್ಣಿಗೆ ತಿಳಿನುಡಿಗಳು.

ತನ್ನಂತೆ ನೋಡಿದರ ಭಿನ್ನಭೇದವನಿಲ್ಲ
ತನ್ನ ಹೊಟ್ಟೆಯ ಸಿಸುವಂತೆ| ನೋಡಿದರ
ಕಣ್ಣಮುಂದೈತೆ ಕೈಲಾಸ ||

ಎಂದು ತನ್ನ ಮನದಲ್ಲಿಯೇ ಕೈಲಾಸವುಂಟೆಂದು ಹೆಣ್ಣು ಹಾಡಿದೆ. ನೋಡುವವರಿಗೆ ಹಳ್ಳಿಗರ ಜೀವನವು ಸುಖಮಯವಾಗಿ ಕಂಡರೂ ಎಡರು ತೊಡರಿನ ಈ ಬಾಳಿನಲ್ಲಿ ಒಂದಿಲ್ಲೊಂದು ಕಂಟಕವು ಬಂದು ಅವರ ಜೀವನವೂ ಒಮ್ಮೊಮ್ಮೆ ಕಲಕುಮಲಕಾಗುವುದು. ಆಗ ಗಂಡನ ಮನೆಯಲ್ಲಿದ್ದ ಹೆಣ್ಣು ಹುಟ್ಟಿ, ಬೆಳೆದು, ಆಡಿದ ತನ್ನ ತವರನ್ನು ನೆನಿಸಿ—

ಕಂಣು ಕಾಣುವತನಕ | ಬೆನ್ನು ಬಾಗುವತನಕ
ತಾಯಿರಲಿ ನನಗ ತವರಿರಲಿ| ನನ್ನವ್ವ
ಅಣ್ಣಯ್ಯರಿರಲಿ ಕರಿಸಾಕ||

ಎಂದು ಹಾಡಿ ಧೈರ್ಯ ತಾಳಿ ತನ್ನ ಬಾಳನ್ನು ನೂಕುವುದು.

'ಬಂಜೆಂಬ' ಮಾತು ಹೆಣ್ಣಿಗೆ ದೇಹದಲ್ಲಿ ಕಾಣದ ಮಹಾರೋಗ. ಮಕ್ಕಳಾಗಲೆಂದು ಹಂಬಲಿಸಿ ಹರಕೆಯ ಹೊರುತ್ತಾಳೆ. 'ಮಕ್ಕಳ ಕೊಡು ಶಿವನೆ ಮತ್ತೊಂದು ನಾನೊಲ್ಲೆ', 'ಬಡತನ ನನಗಿರಲಿ ಭಾಳ ಮಕ್ಕಳಿರಲಿ' ಎಂದು ಶಿವನಿಗೆ ಸೆರಗೊಡ್ಡಿ ಬೇಡಿಕೊಳ್ಳುವಳು.

ಬಡತನ ಬಂದರ ಬಡಿಬ್ಯಾಡ್ರಿ ಮಕ್ಕಳನ
ಆಡ್ಯಾಡಿ:ಬಂದು ತೊಡಿಮ್ಯಾಗ| ಕೂತರ
ಬಂದ ಬಡತನ ಬಯಲಾಗಿ ||

ಎಂದು ಹೆಣ್ಣು ಮಕ್ಕಳೇ ಸರ್ವಸಂಪತ್ತೆಂದು ಗಂಡಿಗೆ ತಿಳಿಹೇಳಿದೆ. ಗಂಡನೇ ಸಕಲ ಸೌಭಾಗ್ಯವೆಂದು ನಂಬಿ ಬೇಸರಿಲ್ಲದೆ ಬಾಳನ್ನು ಹೆಣ್ಣು ಗಂಡನೊಡನೆ ಇಂದಿನ ವರೆಗೂ ಮಾಡುತ್ತ ಬಂದಿದೆ.

ಗಂಡು ಐತಿಹಾಸಿಕ ಪ್ರಸಂಗಗಳನ್ನು ಹಂತಿಯಲ್ಲಿ ಹಾಡಿದರೆ ಹೆಣ್ಣು ಬೀಸುವಾಗ ಕುಮಾರರಾಮನನ್ನು ಕರ್ನಾಟಕ ಕಂದನೆಂದು ಕರೆದು ಆರ ಮನೆಯಲ್ಲಿ ಅವನಿಗೆ ಬಂದ ಹೆರಲಿಯನ್ನು ದುಃಖಿಸಿ ಹಾಡಿದೆ. ಕಲ್ಯಾಣ ಬಸವನು ಶಿವ ಬೆಳಕನ್ನು ತರಲು ಲೋಕವೇ ಶಿವಮಯವಾಯಿತೆಂದು ಹೇಳುವ ಮಾತು ಶಿವಶರಣರ ಮೇಲೆ ಅವಳ ಭಕ್ತಿಯ ದ್ಯೋತಕವು. ಡಂಬಳ ಮಲ್ಲವ್ವನ ಹಾಡು ಕನ್ನಡ ಗರತಿಯರಸಂಸಾರ ಚಿತ್ರ.ಅವಳ ಪ್ರಪಂಚ ದರ್ಶನವು ಬಾಳ್ನುಡಿಯ ತಿಳಿಬೆಳಕು. ಇವೆಲ್ಲವುಗಳಲ್ಲಿಯೂ ಕನ್ನಡ ಗರತಿಯರ ಜೀವನ ಪರಿಮಳವು ಮಘಮಘಿಸುವುದು. ಇವೆಲ್ಲವುಗಳನ್ನು ತ್ರಿಪದಿಯಲ್ಲಿ ನೂರೊಂದುರಾಗ ರಾಗಿಣಿಗಳೊಡನೆ ಕನ್ನಡ ಗರತಿಯರು ಇಲ್ಲಿಯವರೆಗೆ ಹಾಡ ತ್ತ ಬಂದಿದ್ದಾರೆ.

**ಇತರ ಹಾಡುಗಳಲ್ಲಿ :**

ಹಳ್ಳಿಗರ ಧರ್ಮ, ನೀತಿ, ಆಚಾರ, ವಿಚಾರ ಮೊದಲಾದವುಗಳ ಭಾವ ತರಂಗಗಳನ್ನು ನಾವು ಚಂದ್ರಗುತ್ತಿಯ ಅರಸನ ಹಾಡಿನಲ್ಲಿ ಕಾಣಬಹುದು. ಈ ಸಂಗತಿಯು ಶಿವಶರಣರ ಕಾಲಜ್ಞಾನದಲ್ಲಿಯೂ ಬರುವುದು. ನಮ್ಮ

ಧರ್ಮವು ಉಳಿಯಲೆಂದೂ ಕರ್ಮವು ಅಳಿಯಲೆಂದೂ ಹಳ್ಳಿಗರು ಈ ಹಾಡನ್ನು ಹಾಡಿದ್ದಾರೆ.

'ಗರತಿ ಗಂಗವ್ವ' ನಾಣ್ಣುಡಿಯು ಕರ್ನಾಟಕದ ತುಂಬೆಲ್ಲ ಬಳಕೆಯಲ್ಲಿದ್ದರೂ ಯಾವ ಕನ್ನಡಿಗನಿಗೂ ಅದರ ಸಂಬಂಧ ಇಲ್ಲಿಯ ವರೆಗೂ ಏನೂ ಗೊತ್ತಿರಲಿಲ್ಲ. ಗರತಿ ಗಂಗವ್ವನು ತೊರಗಲ್ಲ ನಾಡವಳೆಂದು ಹಾಡಿನಲ್ಲಿ ಬರುವುದು. ಈ ಹಾಡನ್ನು ನಾನು ಸಂಕಲಿಸಿದ್ದು ಅದೇ ಭಾಗದಲ್ಲಿ. ತೊರಗಲ್ಲ ಸಮೀಪದಲ್ಲಿರುವ ಮಲಪ್ರಭಾ ತೀರದ ಮೇಲೆ ಗೊಣಗನೂರಲ್ಲಿ ಒಂದು ಗರತಿಯ ಕಟ್ಟೆಯಿದೆ. ಇದೇ ಆ ಗರತಿ ಗಂಗವ್ವನ ಊರು. ಕರ್ನಾಟಕಕ್ಕೆ ಇದೊಂದೇ ಗರತಿಯ ಕಟ್ಟೆ. ಗರತಿ ಗಂಗವ್ವನು ಮಲಪ್ರಭೆಯ ಮಹಾಪೂರವನ್ನಿಳಿದುದೇ ಹಾಡಿನಲ್ಲಿ ಬಂದ ಕಥಾಸಾರವಾಗಿದೆ. ಮಲಪ್ರಭೆಗೆ ಮಹಾಪೂರ ಬರಲು ಆ ನದಿಯ ತೀರದಲ್ಲಿಯ ಊರ ಮುತ್ತೈದೆಯರು ಹೊಳೆಯನ್ನಳಿಯುವ ಸಂಪ್ರದಾಯವು ಈಗಲೂ ಇರುವುದು. ಹಾಡಿನಲ್ಲಿ ಬರುವ ಸಂದರ್ಭಗಳ ಮೇಲಿಂದ ಈ ಗರತಿ ಗಂಗವ್ವನು ಶಿವಭಕ್ತಳಿದ್ದಳೆಂದು ವಿಶದವಾಗುವದು. ಇಂತಹ ಗರತಿ ಗಂಗವ್ವನನ್ನು ಹಳ್ಳಿಗರು ಮರೆಯಬಹುದೇ ? ಅಂತೆಯೇ ಅವರು ಅವಳ ಸೋಬಾನವಾಡಿದ್ದಾರೆ; ಅವಳ ಹೆಸರು ನಾಣ್ಣುಡಿಯಾಗಿ ನಿಂತಿದೆ.

ಜೇಡರ ದಾಸಿಮಯ್ಯನು ವೀರಶೈವರಲ್ಲಿ ಮಹಾ ಶಿವಶರಣ. ಅವನ ಶಿವಭಕ್ತಿಯನ್ನು ಕೇಳಿದ ಹಳ್ಳಿಗರು ಅವನ ಗುಣಗಾನ ಮಾಡಿದ್ದಾರೆ. ಈ ಮೂರೂ ಐತಿಹಾಸಿಕ ಸಂಗತಿಗಳು ಸಂಶೋಧಕರಿಗೆ ಸೋಜಿಗವನ್ನು ತಾರದಿರಲಾರವು.

ನೈನೆರೆದ ಸೋಬಾನವು ಕನ್ನಡ ಸಂಸ್ಕೃತಿಯ ಶಿರೋಮಣಿ. ನೆರೆದ ಹೆಂಣಿಗೆ ಕರೆಯುವ ಮೀಸಲ ಶಬ್ದಗಳೂ ಉಣಿಸು ತಿನಿಸುಗಳೂ ಯಾರ ಮನವನ್ನು ಸೆಳೆಯಲಿಕ್ಕಿಲ್ಲ ! ಆ ಹಾಡನ್ನು ಕೇಳಿದ ಗಂಡು ನಾನೇಕೆ ಹೆಂಣಾಗಲಿಲ್ಲ ಎಂದು ಮನದಲ್ಲಿಯೇ ಮಳಮಳಿಸುವುದು. ಅಲ್ಲಿ ಎಲ್ಲವೂ ಮೀಸಲಾಗಿ ಬಂದಿದೆ.

ಕಸಬುಗಾರರ ಹಾಡುಗಳು ಕಸಬುಗಾರರ ಹಿರಿಮೆಯನ್ನು ಕೂಗಿ ಕೂಗಿ ಹೇಳುತ್ತವೆ- ದೇವದೇವತೆಗಳನ್ನು ಕೊರೆದ ಬಡಿಗನು ಮಹಾದೇವನನ್ನು

ಕೆತ್ತದೆ ಬಿಡುವನೇ ? ವಡ್ಡಯ್ಯನು ಬ್ರಹ್ಮನ ಹಿರಿಯ ಮಗನೆಂದು ಹಾಡಿನಲ್ಲಿ ಬಂದಿದೆ. ಅವನ ಕಲೆಯು ಅಗಾಧವಾದುದು. ಅವನು ಧರೆಗೆ ಮೊದಲು ಪೂಜೆಗೆ ಕೊರೆದುದು ಶಿವಲಿಂಗವನ್ನು. ನಂತರ ಅವನ ಕೈಯು ಎಲ್ಲ ಚಿತ್ರಗಳನ್ನೂ ಕೊರೆದಿದೆ.

ಕಲ್ಲ ಕೋಳಿಗೆ ಚನಬಸವನ ಧೂಳಿ
ಕೋಳಿ ಕೂಗಿತು ಕಲಿಯುಗ ಮುಗಿಯಿತು || ಕೋ ||

ಎಂದು ಶಿವಶರಣರ ಕಾಲಜ್ಞಾನದೊಂದಿಗೆ ಹಾಡು ಮುಕ್ತಾಯವಾಗುವುದು. ಕುಸಬಿ ಬಡೆಯುವ ಹಾಡಿನಲ್ಲಿ ಇಂಚರ ದನಿಯ ರಾಗದೊಡನೆ ಹಾಸ್ಯಭರಿತವಾದ ಕಸಬುಗಾರನ ಕಸಬಿನ ಮಂತ್ರವನ್ನು ಅರಿಯಬಹುದಾಗಿದೆ. ಹಾಡು ಬೆಡಗಿನಲ್ಲಿದ್ದರೂ ಹಾಡ ಹೆತ್ತಲು ಎಲ್ಲವೂ ವಿದಿತವಾಗುವುದು.

ಮಕ್ಕಳಾಟದಲ್ಲಿ ಗುಜಗುಜಮ್ಮಾಪುರಿಯಾಟವೇ ಮೇಲಾದ ಆಟ. ಇದರಲ್ಲಿ ನಮ್ಮ ಪ್ರಪಂಚದ ಅನುಕರಣವೇ ಬರುವುದು. ಈ ಹಾಡಿನಲ್ಲಿ ನಮ್ಮ ಸಂಸ್ಕೃತಿಯ ಲಗ್ನಸಂಸ್ಕಾರದ ಸತ್ವಸಾರವಿದೆ, ನಮ್ಮ ಹಿರಿಯರ ಮದುವೆಯ ಉದ್ದೇಶವು ಕೂಡಿ ಬಂದಿದೆ. ಆದುದರಿಂದ ನಮಗೆ ನಮ್ಮ ಸಂಸ್ಕೃತಿಯು ತಿಳಿಯಬೇಕಾದರೆ ಈ ಎಲ್ಲ ಹಾಡುಗಳು ಬೇಕೇಬೇಕು.

ಜನಪದ ಸಾಹಿತ್ಯದಲ್ಲಿ ಬಾರದ ವಿಷಯಗಳೇ ಇಲ್ಲ, ಅದು ನಮ್ಮ ಜನಜೀವನದ ಪ್ರತಿಬಿಂಬ, ಜೀವನದ ಸಮಸೃಷ್ಟಿ, ಪ್ರಪಂಚದರ್ಶನದ ಕಥಾಸಾರ. ಶಿವಶರಣರ ಸತ್ಯ ಸಂಕಲ್ಪ, ಒಟ್ಟಿನಮೇಲೆ ಅನ್ನಮಯದಿಂದ ಆನಂದಮಯಕ್ಕೇರುವ ಆತ್ಮ ಪ್ರಯಾಣದ ಮಹಾಕಥೆಯೆಂದೇ ಹೇಳಬಹುದು. ಅದಕ್ಕೆ ಕಟ್ಟುನಿಟ್ಟುಗಳಿಲ್ಲ, ಸಂಸ್ಕೃತದ ಭಾರವಿಲ್ಲ. ಜನವಾಣಿಯೇ ಮನವಾಣಿಯಾಗಿ ನಿರರ್ಗಳ ಶೈಲಿಯಲ್ಲಿ ಹರಿಯುತಿದೆ. ತ್ರಿಪದಿಯೇ ರಾಗವಾಗಿ ತನ್ನತನದಲ್ಲಿ ಗುಂಗಾನಗೈಯುವುದು. ಇದೇ ಸಕಲ ಸಾಹಿತ್ಯದ ತಳಹದಿ; ಲಲಿತ ಸಾಹಿತ್ಯದ ಉದಯದ ಬಾಗಿಲು. ಜೀವನದ ಹಂತದಲ್ಲಿ ಜನಜೀವನ ರವಿಯ ಭಾಗ್ಯೋದಯವಾಗಿ ರಸರಶ್ಮಿಗಳು ಪ್ರಫುಲ್ಲಿತವಾಗಿ ಹರಿಯಲು ಸಾಹಿತ್ಯೋದಯವಾಯಿತು. ಲಾಕ್ಷಣಿಕರು, ವಯ್ಯಾಕರಣಿಗಳು, ಇಂತಹ ರಸರಶ್ಮಿಗಳ ಬಂಧನ ಮಾಡಲು ಮಹಾಕಾವ್ಯೋದಯವಾಯಿತು ಜನಪದ ಸಾಹಿತ್ಯ ಪರಿಮಳವೇ ಲಲಿತ ಸಾಹಿತ್ಯ. ಅದರಲ್ಲಿ ಸಾಹಿತ್ಯ ಮನಮೋಹಕ ನಗ್ನರೇಷೆಯನ್ನೇ ಕಾಣ

ಬಹುದು. ಅದು ನಮ್ಮ ಸಂಸ್ಕೃತಿಯು ಕಣ್ಮರೆಯಾಗುವ ಸಮಯದಲ್ಲಿ ಜನ ಜೀವಾಳಕ್ಕೆಳೆಯುವ ಸಂಜೀವಿನಿ. ಕಾರಣ ಅದು ನಮಗೆ ಕೊನೆಗೂ ಬೇಕು. ಅದನ್ನು ಬೆಳಿಸಿ, ಉಳಿಸಿ ಯುಗಯುಗಕ್ಕೆ ಎತ್ತೊಯ್ಯುವುದು ನಮ್ಮೆಲ್ಲರ ಜನ್ಮ ಸಿದ್ಧ ಹಕ್ಕು.

ಅಪಾರವಾದ ನನ್ನ ಸಂಕಲನದಲ್ಲಿ ಮಾದರಿಗಾಗಿ ಅಲ್ಲೊಂದು ಇಲ್ಲೊಂದು ಹಾಡುಗಳನ್ನು ಎತ್ತಿಕೊಂಡು "ಜನತಾ ಗೀತೆಗಳು" ಎಂದು ಇದನ್ನು ಸಂಗ್ರಹಿಸಲಾಗಿದೆ. ಇನ್ನುಳಿದ ಸಂಕಲನವು ಎಂದು ಬೆಳಕನ್ನು ಕಾಣು ವುದೋ ಏನೊ ! ಜನತಾ ಗೀತೆಗಳಲ್ಲಿಯ ಹಾಡುಗಳ ಅಲ್ಪ ಪರಿಚಯವನ್ನು ಇಲ್ಲಿ ಮಾಡಲಾಗಿದೆ. ಇದರ ವಿಸ್ತಾರವಾದ ವಿಮರ್ಶೆಯನ್ನು ನನ್ನ 'ಕನ್ನಡ ಜಾನಪದ ಗೀತೆಗಳು' ಎಂಬ ಮಹಾ ಪ್ರಬಂಧದಲ್ಲಿ ಮಾಡಿದ್ದೇನೆ. ಈ ಮಹಾ ಪ್ರಬಂಧವೂ ಪ್ರಕಾಶಕರ ಹಾದಿಯನ್ನು ಕಾಯುತ್ತ ಕುಳಿತಿದೆ. ಇದು, ಜನಪದ ಸಾಹಿತ್ಯವಾದುದರಿಂದ ತಿಳಿದುಕೊಳ್ಳಲು ನೆರವು ಎಂದು ಹೊಸ ಶಬ್ದ ಕೋಶ ವನ್ನು ಕೊಟ್ಟಿದ್ದೇನೆ. ನನ್ನ ಈ ಸಂಗ್ರಹವು ಕನ್ನಡಿಗರನ್ನು ತಣಿಸುವುದೆಂದು ಆಶಿಸಿದ್ದೇನೆ.

ಜನಪದಕೆ ಶುಭಂ ಮಂಗಲಂ —

ಕೆರೂರು
ತಾ|| ೫-೫-೧೯೫೭

ಡಾ. ಬಿ. ಎಸ್. ಗದ್ದಗಿಮಠ

ನಮ್ಮ ಮುಂದಿನ ಪುಸ್ತಕ :

# ನಾಳೆಯ ನೋಟ

ಲೇಖಕರು :

ಡಾ|| ಡಿ. ಎಸ್. ಕರ್ಕಿ, ಎಂ. ಎ., ಪಿಎಚ್. ಡಿ.

# ಜನತಾ ಗೀತೆಗಳು

## ಸಂಪ್ರದಾಯ ಹಾಡುಗಳು

*** ಹೊರಮುಚುಕ: –**

ಸಂಪ್ರದಾಯವು ಜನಾಂಗಕ್ಕೆ ನಾಗರಿಕತೆಯ ಹಕ್ಕು, ಇದರಲ್ಲಿ ಜನಾಂಗದ ಸಂಸ್ಕೃತಿಯು ತುಂಬ ಬಿಂಬಿತವಾಗಿದೆ. ಕನ್ನಡಿಗರು ಸಂಪ್ರದಾಯ ಪ್ರೇಮಿಗಳು. ಅವರ ಹಬ್ಬ ಹುಣ್ಣಿಮೆಗಳು, ಸುಗ್ಗಿ ಸುಖಕಾಲಗಳು ಸಂಪ್ರದಾಯದ ಮೇಲೆ ನಿಂತಿವೆ. ಈ ಸಂಪ್ರದಾಯಗಳನ್ನು ಸಮಯಕ್ಕೆ ಸರಿಯಾಗಿ ಅವರು ಹಾಡುತ್ತಬಂದಿದ್ದಾರೆ. ಬನ್ನಿ ಹಬ್ಬವು, ಎಲ್ಲರೂ ಜೀವವೊಂದಾಗಿ ಇರಲು; ಕುಂದಣದಾರುತಿ ಬೆಳಗಲು. ನಾಗರ ಹಬ್ಬವು ಕನ್ನಡಿಗರಿಗೆ ದ್ರಾವಿಡ ಜನಾಂಗದಿಂದ ಬಂದ ವೈಶಿಷ್ಟ್ಯ. ತವರುಮನೆಗೆ ಬಂದ ಹೆಣ್ಣಿನ, ಗಂಡನ ಮನೆಯ ಆಶೆ ನಿರಾಶೆ, ಸುಖದುಃಖಗಳ ರಾಗ. ನಾಗರ ಪಂಚಮಿಗೆ ತವರಿಗೆ ಬಂದು ಹೆಣ್ಣು ಗುರ್ಚಿ ಜೋಕಮಾರರ ಕಂಡು, ಗೌರಿಸೀಗೆಯನಾಡಿ ಆರಳಿಲಿ ಬಸವನ ತಂದು, ಹಾಡಿ, ಆಡಿ, ತವರು ಮನೆಯ ಹಬ್ಬ ದೂಟಿ ಮಾಡಿ, ಹೊಸಬಳಾಗಿ ಮತ್ತೆ ಪ್ರಪಂಚಕ್ಕೆ ಕೈಗೂಡಲು ಗಂಡನ ಮನೆಯ ಸೇರುವುದು.

* ಹೊರಮುಚುಕವು ಹಳ್ಳಿಗರ ನುಡಿಯಲ್ಲಿ 'ಅಂತರ್ದರ್ಶನ'; ಕೇವಲ ಸ್ಪರ್ಶದಿಂದ ಒಳಮೈ ತೋರಿಸುವ ಒಂದು ಗಿಡಮೂಲಿಕೆ.

# ಬನ್ನಿ ಹಬ್ಬ

ಬನ್ನಿ ಮುಡಿಯುನ ಬಾರ ಕೋಲು ಕೋಲ
ಚಿನ್ನ ತರವುನ ಬಾರ ಕೋಲು ಕೋಲ ಪ.

ಊರ ಸೀಮೆಯ ದಾಟಿ, ಕಾಡ ಗಡಿಯನು ಸೇರಿ
ಕಾಡ ಸಂಪತ್ತ ತರ ಬನ್ನಿ ॥ ಕೋಲು ಕೋಲ ೧

ಬೆಳದ ಬೆಳಸಿಗೆ ಬನ್ನಿ, ಭೂಮಿ ತಾಯಿಗೆ ಬನ್ನಿ
ನಾಡ ಸಂಪತ್ತ ಬೆರಿ ಬನ್ನಿ ॥ ಕೋಲು ಕೋಲ ೨

ಅರಸನಽ ಅಂಗಳಕ, ನರನ ರಂಗಽ ಹೊಯ್ದು
ಹೊರಸಿ ತಂದಾರ ಸಿರಿ ಬನ್ನಿ ॥ ಕೋಲು ಕೋಲ ೩

ದೇವ ದೇವರ ಬನ್ನಿ, ದೇವ ದೈವದ ಬನ್ನಿ
ನಾವು ಮುಡಿವೂದು ನಮ ಬನ್ನಿ ॥ ಕೋಲು ಕೋಲ ೪

ಹಡೆದ ತಾಯಿಗೆ ಬನ್ನಿ, ಹಡೆದ ತಂದಿಗೆ ಬನ್ನಿ
ಪಡೆದ ಗಂಡನಿಗೆ ನಮ ಬನ್ನಿ ॥ ಕೋಲು ಕೋಲ ೫

ಚಿನ್ನದ ಕೈಗಡಗ, ಚನ್ನೇರು ಇಟಗೊಂಡು
ಚಿನ್ನದಾಭರಣಽ ನಡ ಬಾಗಿ ॥ ಕೋಲು ಕೋಲ ೬

ಗೆಜ್ಜಿ ಹೆಜ್ಜೀಹಾಕಿ, ಗುಜ್ಜೇರು ಕುಣಿದಾರ
ವಜ್ಜರ ವಡ್ಯಾಣ ಘಿಲ ಘಿಲ ॥ ಕೋಲು ಕೋಲ ೭

ನಾವು ಕುಣಿಯುಣ ಬನ್ನಿ, ಹ್ಯಾಂವ ಮರೆಯುಣ ಬನ್ನಿ
ಜೀವ ಒಂದಾಗಿ ಇರ ಬನ್ನಿ ॥ ಕೋಲು ಕೋಲ ೮

ಇಂದ ಮುಡಿಯುವ ಬನ್ನಿ, ಮುಂದೆಮುಗ ಹೊನ್ನಾಗಿ
ಕುಂದಣದಾರೂತಿ ಬೆಳಗುದಕ ॥ ಕೋಲು ಕೋಲ ೯

## ನಾಗರ ಪಂಚಮಿ

ನಾಗಪ್ಪಗ್ಹಾಲ ಹೊಯ್ಯೋಣ
ನಾಗರ ಹೆಡಿಯ್ಹಾಂಗ ಆಡೋಣ ಪ.

ನಾಗರ ಪಂಚಮಿ ನಾಡ ಹೆಣ್ಣಿಗೆ ಹಬ್ಬ
ನಾಗಪ್ಪಗ್ಹಾಲ ಎರಿಯೋಣ ॥ ನಾ ॥ ನನ ಗೆಣತಿ
ನಾಗರ ಹೆಡಿಯ್ಹಾಂಗ ಆಡೋಣ ॥ ನಾ ೧

ಗುರುದೇವ ನಿಮಪಾಲ, ಹರಹರಸಿ ನಿಮಪಾಲ
ಶರಣರಿಗೆ ಹಾಲು ಹಿರಿಯರಿಗೆ ॥ ನಾ ॥ ಎರಿಯೋಣ
ಕಿರಿಯರಿಗೆ ಹಾಡಿ ಹರಿಸೋಣ ॥ ನಾ ೨

ಅಳ್ಳಿಟ್ಟು ತಂಬಿಟ್ಟು, ಮಾಡಿಟ್ಟ ಎಳ್ಳುಂಡಿ
ದಳ್ಳೂರಿ ಕಣ್ಣ ಹಣಿಯುವನ ॥ ನಾ ॥ ಕೊರಳಾನ
ನಾಗ ನಿನಗೆಡಿಯೊ ಕೈಮುಗಿದು ॥ ನಾ ೩

ವಾರೀಽಗಿ ಗೆಳತೇರ ಕೇರಿಯ ಕೆಳದೇರ
ನೇರಿ ಒಂದೆಡೆ ಕೂಡೋಣ ॥ ನಾ ॥ ಜೋಕಾಲಿ
ತೂರಿ ಜೀಕಽವ ಆಡೋಣ ॥ ನಾ

ಚಂದ್ರಕಾಳಿಯ ಸೀರಿ ಚಂದ್ರ ಕುಪ್ಪುಸ ತೊಟ್ಟು
ಬಂದ ಹಬದಾಗ ನಲಿಯೋಣ ॥ ನಾ ॥ ನಕ್ಕಾಡಿ
ಒಂದಾಗಿ ಇದ್ದು ಅಗಲೋಣ ॥ ನಾ ೫

ನಾಕಾಗುತನಕ ಕೂಡಿ ಜೋಕಾಲಿ ಜೀಕೂನ
ನಾಗರ ಮಿಡಿಯಾಗಿ ನುಳಿಯೋಣ ॥ ನಾ ॥ ವರವರುಷ
ನಾಗರಪಂಚಮಿಗೆ ಕೂಡೋಣ ॥ ನಾ ೬

ಗಂಡನ ಮನಿಯಾನ, ಕಂಡ ಬಾಳುವೆ ಹಾಡಿ
ಉಂಡು ಓಡ್ಯಾಡಿ ಆಡೋಣ ॥ ನಾ ॥ ಮನೆ ಮಾತ
ಹಿಂಡಿನಾಗಾಡಿ ಮರೆಯೋಣ ॥ ನಾ ೭

ಪಂಚಮಿ ಬರಲೆಪ್ಪ, ಮಂಚ ಕಟ್ಟಿಲಿ ಮನೆಗೆ
ಕೆಂಚಿ ಗೆಳತೇರು ಕೂಡ್ಸಲಿ ॥ ನಾ ॥ ನಮ ಜೀಕ
ಮಿಂಚಿ ಮುಗಲೀಗೆ ಏರ್ಸಲಿ ॥ ನಾ ೮

ನಾಗರ ಪಂಚಮಿ, ನಾಡ ಹೆಣ್ಣಿಗಿ ಹಬ್ಬ
ನಾಗಪ್ಪಗ್ಹಾಲ ಎರೆಯೋಣ ॥ ನಾ ॥ ನನ ಗೆಣತಿ
ನಾಗರ ಹೆಡಿಯ್ಹಾಂಗ ಆಡೋಣ ॥ ನಾ ೯

## ಗೌರಿ ಸೀಗೆ

ಯಾಕ ಬುದ್ದಿ ಬಾರದ
ಹರ ಹರ ನಮ್ಮಾ ದೇವರಿಗೆ ಯಾಕ ನಿದ್ರಿ ತೋರದ ಪ.

ಯಾಕ ಬುದ್ಧಿ ಬಾರದ, ಶಿವ ನಿಮಗ್ಯಾಕ ನಿದ್ರಿ ತೋರದ
ಲೋಕದವರ ಮುಂದ ಮಾರಿತೋರಬಾರದಮ್ಮ ॥ ಯಾ ॥ ೧

ಔರಂಗದಲ್ಲಿದ್ದಾರು, ಮರಾತರ ಮನೆಯ ಕದ್ದಾರು
ನಾರೀಗೊಬ್ಬಳಿಗೆ ಮೆಚ್ಚಿ ಬಳಿಗೆ ಬಾರದಿದ್ದಾರಮ್ಮ ॥ ಯಾ ॥ ೨

ಕಟ್ಟಿಗಿ ಮಣ್ಣ ಹೊತ್ತಾರು, ತಾ ಹುಟ್ಟಿಲೆ ತಿವಿಸಿಕೊಂಡಾರು
ಗಟ್ಯಾಳ ಹರಳೆರಮುಂದ, ಹೊಟ್ಟೆಹೊರಕೊಂಡ
ಜಂಗಮರಮ್ಮ ॥ ಯಾ ॥ ೩

ಮಂಟಪದೊಳಗ ಹೊಕ್ಕಾರು, ತಾ ಮದುವೆಯ ಕೆಡಸಿ
ಹೋದಾರು
ಕಂಟಕಗೇಡೆಂದು ನೆಂಟರಮುಂದ ಹೇಳ್ಯಾರಮ್ಮ ॥ ಯಾ ॥ ೪

ಸೂಳಿಯ ಕಂಕಣ ಕಟ್ಯಾರು, ಹೇಳಿದ ಮನೆಯ ಸುಟ್ಟಾರ
ಬೇಡ ಬೇಡಂದರ ಜೂಜನಾಡಿ ಸೋತಾರಮ್ಮ ॥ ಯಾ ॥ ೫

ಚೆಂಗಳಿ ಮನಿಗೆ ಹೋದಾರು, ಹಸಗೂಸಿನ ಪ್ರಾಣ ತಿಂದಾರು
ಇಳೆಯ ಚಿತ್ತರದಲ್ಲಿ ಕೆಂಪಗ ತಿದ್ದಿ ನಲಿದಾರಮ್ಮ ॥ ಯಾ ॥ ೬

ಮಾದೇವಿ ಮನೆಗೆ ಹೋದಾರು, ಸಣ್ಣ ಬಾಲಾಗಿ
ಮೊಲೆಯನುಂಡಾರು
ದೋಸಿ ಪಿಡ್ಡಕ್ಕನ ಮನೆಗೆ ಸಿಸುವಾಗಿ ಉಂಡು
ಬಂದಾರಮ್ಮ ॥ ಯಾ ॥ ೭

ಯಾಕ ಬುದ್ಧಿ ಬಾರದ, ಶಿವ ನಿಮಗ್ಯಾಕ ನಿದ್ರಿ ತೋರದ
ಲೋಕದವರ ಮುಂದ ಮಾರಿ ತೋರಬಾರದಮ್ಮ ॥ ಯಾ ॥ ೮

## ಗುರ್ಚಿ

ಗುರ್ಚಿ ಗುರ್ಚಿ ಎಲ್ಯಾಡಿ ಬಂದಿ
ಹಳ್ಳಕೊಳ್ಳ ತಿರುಗ್ಯಾಡಿ ಬಂದೆ.
ಕಾರಮಳೆಯೆ ಕಪ್ಪತಮಳೆಯೆ
ಸುರುಮಳೆಯೆ ಸುರಿಮಳೆಯೆ.

ಸುರಿಮಳೆಯಾದರ ಒಕ್ಕಲಿಗ ಒಕ್ಕಲಿಗ
ಒಕ್ಕಲಿಗಣ್ಣ ಬಿತ್ತ್ಯೋ ಹೊನ್ನ
ಸುತ್ತ ಸುರಿಯಿತು ಸುರಿಮಳೆಯೊ ಸುರಿಮಳೆಯೊ.

ಹಸರ ಬೆಳೆಯು ಭೂತಾಯಿ ಭೂತಾಯಿ
ಮಗಿಮಳೆಯಾಗಿ ಹೂ ಬೆಳಸಿ ಹೂ ಬೆಳಸಿ.

ಹಕ್ಕಿಯ ಹಬ್ಬ ಹೊಲದಾಗ ಹೊಲದಾಗ
ಕಾರಮಳೆಯೆ ಕಪ್ಪತ ಮಳೆಯೆ
ಸುರುಮಳೆಯೆ ಸುರಿಮಳೆಯೆ.

ಆಯುಗಾರಣ್ಣ ಆಯ ಬೇಡೊ
ಕದರ ಸಾಲಿ ಕಂಬಾರ ಕಂಬಾರ.

ಬಿದರಸಾಲಿ ಮ್ಯಾದಾರ ಮ್ಯಾದಾರ
ಆಯುಗಾರನ್ ಹೆಂಡತಿ ಗಂಡ ಹಡೆದಾಳ
ನೆತ್ತಿಗೆ ಎರಿಯಾಕ ನೀರಿಲ್ಲ ನೀರಿಲ್ಲ.

ಕರಿಗಂಬಳಿಯು ಗುರುಸಿದ್ಧ ಗುರುಸಿದ್ಧ
ಕಂಬಳಿ ಬೀಸಲು ಸುರಿಮಳೆಯೆ ಸುರಿಮಳೆಯೆ.

ಕಾರ ಮಳೆಯೆ ಕಪ್ಪತ ಮಳೆಯೆ
ಹಳ್ಳ ಕೊಳ್ಳ ತುಂಬಿಸು ಮಳೆಯೆ
ಸುಣ್ಣ ಕೊಡತಿನಿ ಸುರಿಯಲಿ ಮಳೆಯ
ಬಣ್ಣ ಕೊಡತಿನಿ ಬಾರೆಲೆ ಮಳೆಯೆ
ಸುರುಮಳೆಯೆ ಸುರಿಮಳೆಯೆ.

## ಜೋಕುಮಾರ

ಜೋಕುಮಾರ ಹುಟ್ಟಲಿ ಲೋಕವು ಬೆಳೆಯಲಿ
ಆಕಳ ಹಾಲ ಕರೆಯಲಿ। ಹರಿಯಾಗ
ಕಾತೆದ್ದು ಮಸರ ಕಡೆಯಾಲಿ ೧

ಅಡ್ಡಡ್ಡ ಮಳೆಬಡದ, ದೊಡ್ಡ ದೊಡ್ಡ ಕೆರೆ ತುಂಬಿ
ಗುಡ್ಡಗಳೆಲ್ಲ ಹೈನಾಗಿ ॥ ಜೋ ॥ ಗೌಡ್ಸರ
ಸೆಡ್ಡಿಯ ಮ್ಯಾಲೆ ಸಿರಿಬಂದ ॥ ಜೋ ॥ ೨

ಹಾಸ್ಯಾಸಿ ಮಳೆಬಡದ,ಬೀಸ್ಬೀಸಿ ಕೆರೆತುಂಬಿ
ಬಾಸಿಂಗದಂಥ ತೆನೆಬಾಗಿ ॥ ಜೋ ॥ ಗೌಡ್ಸರ
ವಾಸಿಯ ಮ್ಯಾಲೆ ಸಿರಿಬಂದ ॥ ಜೋ ॥ ೩

ಕರಣುಳ್ಳ ಕುಮರಾನ, ಕೆರೆ ನೋಡ ಹೋದಾನ
ಕರದು ಕಾರ್ಗಾಲ ಮಳೆ ಬಂತ ॥ ಜೋ ॥ ಗೌಡ್ಸರು
ಕರೆದು ಹಚ್ಚಡ ಹೊಚ್ಯಾರ ॥ ಜೋ ॥ ೪

ಕೆಂಚ ನಮ್ಮ ಕುಮಾರ, ಬೆಂಚೀಯ ನೋಡ ಹೋದ
ಮಿಂಚಾವ ಕಾರ ಮಳೆಬಂದ ॥ ಜೋ ॥ ಗೌಡ್ಸರು
ಕೆಂಪು ಹಚ್ಚಡ ಹೊಚ್ಯಾರ ॥ ಜೋ ॥ ೫

ಹುಟ್ಟಿದೇಳು ದಿವಸದಲಿ, ಪಟ್ಟಣವ ತಿರುಗ್ಯಾನ
ದಿಟ್ಟಾ ದೇವಿ ನಿನ ಮಗನ ॥ ಜೋ ॥ ಕೋಮರಾಗ
ಕೊಟ್ರವ್ವೇಳು ದಿನಗಳ ॥ ಜೋ ॥ ೬

ಪುಂಡಿಯ ಪಲ್ಲೆ ನಂಜು, ಕೊಂಡು ತಾನುಣಲಿಲ್ಲ
ದಂಡನಾಳವನ ಬಂಕ್ಯಾಗ ॥ ಜೋ ॥ ನಮದೇವಿ
ಹೊಂಬಳಿ ಸರವ ಬಗೆಸಿದಳ ॥ ಜೋ ॥ ೭

ಚಕ್ಕೋಟಿ ರಸಪಲ್ಲೆ, ಇಕ್ಕೊಂಡು ಉಣಲಿಲ್ಲ
ದಿಕ್ಕನಾಳವನ ಬಂಕ್ಯಾಗ ॥ ಜೋ ॥ ನಮದೇವಿ
ಚೊಕ್ಕ ಮುತ್ತಿನ ಸರಬಗೆಸಿ ॥ ಜೋ ॥ ೮

ಅರಕೊಂಬ ಅರಿಷಿಣವ, ದರಬಟ್ಲೆ ಒಳ್ಳೆಣ್ಣೆ
ನರ ನಮ ದೇವಿ ಕುಲಿ ಹೊಕ್ಕ ॥ ಜೋ ॥ ಎರಕೊಂಡ
ತೆರೆಬಂದು ನೀರು ಬಾಗಿಲಕ ॥ ಜೋ ॥ ೯

ಬಾಲ ಹುಟ್ಟಿದಸಂತ, ಬನಕ ತೊಟ್ಟಿಲ ಕಟ್ಟಿ
ಬಾಲಗನ್ನೆರು ನೆರೆಯುತಲಿ ॥ ಜೋ ॥ ಹಾಡಿದರ
ಕೋಲೆನು ಜನಕ ಜಯುಜಯುವ ॥ ಜೋ ॥ ೧೦

ಕಬ್ಬುಳ್ಳ ತ್ವಾಟ್ದಾಗ ಇಬ್ಬನ್ನಿ ಬರದ್ಹಂಗ
ಇಬ್ಬರು ತೂಗಲು ಮಲಗನ ॥ ಜೋ ॥ ನಮದೇವಿ
ಹೆಬ್ಬುಲಿ ಮಗನ ಹಡೆದಾಳ ॥ ಜೋ ॥ ೧೧

ಹಾರೂರ ಕೇರ್ಯಾಗ, ಹಾರಿ ಚೆಂಡಾಡ್ಯಾನ
ನಾರಿ ನಿನಮಗ ಕೊಮರಯ್ಯ ॥ ಜೋ ॥ ಚೆಂಡಾಡಿ
ಊರ ಭೂಮೆಲ್ಲ ಬೆಳಿಬಂದ ॥ ಜೋ ॥ ೧೨

ಒಕ್ಕಲಗೇರ್ಯಾಗ, ಹೊಕ್ಕ ಚೆಂಡಾಡ್ಯಾನ
ಅಕ್ಕನ ಮಗನವ ಕೊಮರಯ್ಯ ॥ ಜೋ ॥ ಆಡಿದರ
ಅಕ್ಕಿ ನಾಡೆಲ್ಲ ಬೆಳಿಬಂದ ॥ ಜೋ ॥ ೧೩

ಹಾಲ್ಬೇಡಿ ಹಲುಬ್ಯಾನ ಕೆನೆಬೇಡಿ ಕುಣಿದಾನ
ಮೊಸರಬೇಡಿ ಕೆಸರ ತುಳಿದಾನ ॥ ಜೋ ॥ ಕೊಮರಾಮ
ಕುಸುರಾದ ಗೆಜ್ಜೆ ಕೆಸರಾಗಿ ॥ ಜೋ ॥ ೧೪

ಸಂದಿಯಾ ಮನೆಯನ್ನ ಗೊಂದಿಯಾ ಮನೆಯನ್ನ
ಗೊಂಜಾಳದನ್ನ ಕೆಸರನ್ನ ॥ ಜೋ ॥ ನಮಕೊಮರ
ಸಂದೀಯ ಹೊಕ್ಕ ನಡುಗೇರಿ ॥ ಜೋ ॥ ೧೫

ಹಾದಿಽಯ ಮನೆಯನ್ನ ಬೀದಿಽಯ ಮನೆಯನ್ನ
ಬಾಜರದನ್ನ ಮೊಸರನ್ನ ॥ ಜೋ ॥ ಕೊಮರಯ್ಯ
ಗೌಳೇರೋಣಿ ಹೊಕ್ಕ್ಯಾನ ॥ ಜೋ ॥ ೧೬

ಹಳ್ಳಕ ತಾ ಹೋಗಿ ಸಣ್ಣವ್ನ ಇಟ್ಟ್ಯಾನ
ಕನ್ನಡಿ ತಗೆದು ಮೊಕನೋಡೊ ॥ ಜೋ ॥ ಕೊಮರಾಮ
ಕಣ್ಣು ಮೂಗಿಲೆ ಕರಚಲುವ ॥ ಜೋ ॥ ೧೭

ಅಳಕೂತ ಬಳಕೂತ, ಬಂದಾಳ ಗುಳಕವ್ವ
ಬಂದು ನಿಂತಾಳ ಅಗಸ್ಯಾಗ ॥ ಜೋ ॥ ಗೌಡಽರು
ತಂದು ಇಳಿಸ್ಯಾರ ಸೆಳಿಮಂಚ ॥ ಜೋ ॥ ೧೮

ಕೊಮಾರ ತಾ ಬರ್ತಾನಂತ, ಕೋಣೀಯ ಸಾರಿಸಿ
ಜಣ ಒಕ್ಕಲಗಿತ್ತಿ ಚದರಿಽಯ ॥ ಜೋ ॥ ಮನಿಯಾಗ
ಒಂದಾರ ಜಾವ ಇರಲಿಲ್ಲ ॥ ಜೋ ॥ ೧೯

ಹೋಗೂತ ಹೊನ್ನೀ ಮುರಿದ, ಬರೂತ ಬನ್ನೀ ಮುರಿದ
ಕಂಡಕಂಡಲ್ಲಿ ಕರಿಬೇವ ॥ ಜೋ ॥ ಮುಡುವಂತ
ಪುಂಡನ್ನ ದೇವಿ ಹಡೆದಾಳ ॥ ಜೋ ॥ ೨೦

ಅಕ್ಕ ಹಡೆದಾಳಂತ, ಏನೊಯ್ದೆ ಬನವಯ್ಯ
ಮುತ್ತಿನ ಚೆಂಡ ಕಾರ್ಮುಗಿಲ ॥ ಜೋ ॥ ಸುರಿಮಳೆಯು
ಅರತಿಲಿ ಒಯ್ದೆ ಹರಳೆಲೆಯ ॥ ಜೋ ॥ ೨೧

ಬೆಣ್ಣಿಯ ತಾ ಮುದ್ದಿ, ಕನ್ಯಾಳ ಕೊಮರಾಗ
ಹೊನ್ನ ಮಾಳಿಗೆ ಮನೆಯವ್ವ ॥ ಜೋ ॥ ಕೆನೆ ಮೊಸರ
ಬಿನ್ನಾಯ ಹೇಳ ಕೊಮರಾಗ ॥ ಜೋ ॥ ೨೨

ಹಾಲ ತಾ ಮಗಿತುಂಬಿ, ಬಾಲ ನಮ್ಮ ಕುವರಾಗ
ಮೇಲ ಮಾಳಿಗೆ ಮನೆಯವ್ವ ॥ ಜೋ ॥ ನೀ ಕೊಟ್ರ
ಮೇಲಾಗಿ ಬೆಳಿಲಿ ನಿಂಭೂಮಿ ॥ ಜೋ ॥ ೨೩

ಅಳೂತಲಿ ಸಿರಿತಾನು, ಬಳಲುತಲಿ ಬಂದಾಳು
ಅಳಕಾದಂಬಲಿ ತಡೆದಾವು ॥ ಜೋ ॥ ನಮಕೊಮರ
ಕಳೆದೇಳು ದಿನಕ ಮರಣವ್ವ ॥ ಜೋ ॥ ೨೪

ಹುಟ್ಟಿದ ಏಳ್ದಿನಕ, ಪಟ್ಟಣವ ತಿರುಗ್ಯಾನ
ದಿಟ್ಟಾ ದೇವಿ ನಿನ ಮಗ ॥ ಜೋ ॥ ಕೊಮರಾಗ
ಬರೆದಾಳ ಸೆಟವಿ ಏಳ್ದಿನ ॥ ಜೋ ॥ ೨೫

ಪುಂಡರ್ನ ಪುಂಡಾಟ್ಕೆ, ಹಿಂಡ ಮಂದಿ ಕೂಡ್ಯಾರ
ಕಂಡಲಿ ಕಲ್ಲೀಗೆ ಬಡಿದಾರ । ಜೋ । ರಾತ್ರ್ಯಾಗ
ಅಗಸರ ಕಲ್ಲಾಗ ತುರಿಕ್ಯಾರ । ಜೋ । ೨೬

ಜಂಗಮ ನಾನಲ್ಲ, ಜೋಗಯ್ಯ ನಾನಲ್ಲ
ತಿಂಗಳಿಗೆ ಬರುವ ತಿರುಕಲ್ಲ । ಜೋ । ತಾಯವ್ವ
ತುಂಬಿ ಮೊರ ಜೋಳ ನೀಡವ್ವ । ಜೋ । ೨೭

ಕಲ್ಗಳಿಗಿ ಕಬ್ಬಿಣದ, ಮೆಟ್ಟ್ಬಿಚ್ಚಿ ಏರ್ಯಾಳ
ಬಳಕೂತ ಬಳತವ ತಗೆದಾಳ । ಜೋ । ಒಕ್ಕಲಗಿತ್ತಿ
ಬಿಳಿ ಎಳ್ಳ ತುಂಬಿ ನೀಡಾಳ । ಜೋ । ೨೮

ಜಯ ಜಯ ಕೊಮರಾಗ, ಜಯ ಜಯ ಹಾಡ್ತಿರೆ
ಜಯ ಜಯ ಭೂಮಿ ಬೆಳಸ್ತಿಗೆ । ಜೋ। ಹಡದವ್ವ
ಜಯ ಜಯವಿರಲಿ ಜಗದಾಗ । ಜೋ । ೨೯

## ಅರಳೆಲೆ ಬಸವ

ಒಂದ ಸುತ್ತಿನ ಕ್ವಾಟಿ
ಅದರೊಳು ಹೊಂದಿ ನಿಂತೈನ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೧

ಎರಡು ಸುತ್ತಿನ ಕ್ವಾಟಿ
ಅದರೊಳು ನೊಡರು ತೂಗುವ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೨

ಮೂರು ಸುತ್ತಿನ ಕ್ವಾಟಿ
ಅದರೊಳು ಮೂಡಿ ಬಂದಾನ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೩

ನಾಕ ಸುತ್ತಿನ ಕ್ವಾಟಿ
ಅದರೊಳು ನ್ಯಾಯಮೂರ್ತಿಯು ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೪

ಐದ ಸುತ್ತಿನ ಕ್ವಾಟಿ
ಅದರೊಳು ಐಕ್ಯಮೂರ್ತಿಯು ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೫

ಆರ ಸುತ್ತಿನ ಕ್ವಾಟಿ
ಅದರೊಳು ಅರಳಿ ಬೆಳಗುವ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೬

ಏಳು ಸುತ್ತಿನ ಕ್ವಾಟಿ
ಅದರೊಳು ಜಗವನಾಳುವ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೭

ಎಂಟು ಸುತ್ತಿನ ಕ್ವಾಟಿ
ಶಿವನಿಗೆ ಕಂಟಲೆತ್ತೇನೊ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೮

ಒಂಬತ್ತು ಸುತ್ತಿನ ಕ್ವಾಟಿ
ಅದರೊಳು ತುಂಬಿ ಬಂದಾನೊ ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೯

ಹತ್ತು ಸುತ್ತಿನ ಕ್ವಾಟಿ
ಅದರೊಳು ಸುತ್ತ ನೋಡಲು ಬಸವ
ಬಸವಕ ಬಸವನ್ನಿರೆ
ಬಸವನ ಪಾದಕ ಶರಣನ್ನಿರೆ ॥ ೧೦

# ಹಂತಿಯ ಹಾಡುಗಳು

*** ಹೊರಮುಚುಕ :**

ಒಕ್ಕಲುತನವು ದ್ರಾವಿಡ ಜನಾಂಗದ ಮೊದಲು ಕಸಬು. ಅವರು ಒಕ್ಕಲಾಗಿ ನಿಂತ ಮೇಲೆ ಒಕ್ಕಲುತನವು ಮೊದಲಾಯಿತು. ಆರ್ಯರು ದ್ರಾವಿಡರಿಂದಲೇ ಒಕ್ಕಲುತನವನ್ನು ಕಲಿತುಕೊಂಡರು. ಅಂತೆಯೇ "ಹಂತಿಪದಕೊಂದಿಲ್ಲ ನಿಂತು ಬೆನಕನ ಪೂಜೆ". ಒಕ್ಕಲಿಗನ ಬೇಸಾಯದಲ್ಲಿ ಗಣಪತಿಗೆ ಪೂಜೆಯಿಲ್ಲ. ಬರುಬರುತ ದ್ರಾವಿಡ ಸಂಸ್ಕೃತಿಗೆ ಅನುಭಾವವೇ ಕಣ್ಣಾಗಿ ಶಿವಶರಣ (Social workers) ರಿಗೆ ಸುಗ್ಗಿಯಲ್ಲಿ ಸ್ಥಾನ ದೊರೆಯಿತು. ಇವೆಲ್ಲವನ್ನು ನಾವು ಹಂತಿಯ ಹಾಡಿನಲ್ಲಿ ಕಾಣಬಹುದು. ಹಂತಿಯ ಹಾಡುಗಳು ಒಕ್ಕಲಿಗನ ಸುಗ್ಗಿಯ ಹೌಸು ಹುಮ್ಮಸುಗಳ ಗುಂಗಾನ. ಬನಬನವೇ ಬೇಸಾಯವನ್ನು ಹಾಡಿ ನಲಿಯುವುದು; ತಣಿಯುವುದು. ಅಂತೆಯೇ "ಸುಗ್ಗಿದಾಸೋಹೆಂದು ಹಿಗ್ಗು ಬೆಳುವಲ ನೋಡು". ಪ್ರಪಂಚದ ತಿರುಳನ್ನೊಳಗೊಂಡ ಬಿಡಿ ಹಾಡುಗಳು ಸದಾ ಸುತ್ತಲೂ ಮಗ ಮಗಿಸುವುವು. ಒಕ್ಕಲಿಗನು ಹಂತಿಯಲ್ಲಿ ದೇವರನ್ನೂ ನಾಡಗಲಿಗಳನ್ನೂ ಹಾಡಿ ಹಾಡಿ ಕಣವು ಹುಲುಸಾಗಲೆಂದು ನೆರಗೊಡ್ಡಿ ಬೇಡಿದ್ದಾನೆ.

---

* ಹೊರಮುಚುಕವು ಹಳ್ಳಿಗರ ನುಡಿಯಲ್ಲಿ 'ಅಂತರ್ದರ್ಶನ'; ಕೇವಲ ಸ್ಪರ್ಶದಿಂದ ಒಳಗನ್ನು ತೋರಿಸುವ ಒಂದು ಗಿಡಮೂಲಿಕೆ.

# ಬಿಡಿ ಹಾಡುಗಳು

ಬೂದನಿಗೆ ಬಾಸಿಂಗ, ಭೂಮಿ ತಾಯಿಗೆ ದಂಡೆ
ಸಾಲ ಶರಣರಿಗೆ ನರಮಾಲೆ । ಕಟಿಗೊಂಡು
ಮಾದಯ್ಯ ಗೆದ್ದ ಕೈಲಾಸ ೧

ಶಿವಶಿವ ಎಂದಾರ, ಸಿಡಿಲೆಲ್ಲ ಬಯಲಾಗಿ
ಕಲ್ಲ ಬಂಡೆರಗಿ ಕಡೆಗಾಗಿ । ಎಲೆ ಮನವ
ಶಿವನೆಂಬ ನಬುದ ಬಿಡಬ್ಯಾಡ ೨

ಹಂತಿ ಹೊಡೆಯುತ ನೆನೆದೆ, ಸಂತನದಿ ಶರಣರನು
ಕಂತುಹರ ನಿನ್ನ ಭಕ್ತರನು । ನೆನೆಸಿದರ
ಸಂತನದಿ ನೀಡೊ ವರಶಿವನೆ ೩

ಹಂತಿಪದಕೊಂದಿಲ್ಲ, ನಿಂತು ಬೆಸಕನ ಪೂಜೆ
ಹಂತಿಯೊಳು ಪೂಜೆ ಶರಣರಿಗೆ । ಒಕ್ಕಲಿಗ
ಸ್ವಂತ ನೆನೆಯೆಂದ ಗಣಪನಿಗೆ ೪

ಬೇಡ ಬೇಟೆಗೆ ಹೋಗಿ, ಬೆಲ್ಲ ಪತ್ತರಿ ಕೊಯ್ದು
ಬೇಡ ಕನ್ನಯ್ಯ ಶಿವಪೂಜೆ । ಮಾಡಿದರ
ನಾಡೆಲ್ಲ ನೋಡು ಶಿವರಾತ್ರಿ ೫

ಕನ್ನ ಬೇಟೆಯನಾಡಿ, ಹೊನ್ನಬೆಟ್ಟವ ತಿರುಗಿ
ಪನ್ನಂಗಧರಗೆ ಎಡೆಮಾಡಿ । ನರಿಕೂಗಿ
ಸಣ್ಣ ರಾಸ್ಯುಕ್ಕಿ ಕಣತುಂಬಿ. ೬

ಹರನ ಶಿಖರದ ಮೇಲೆ, ಸಿರಿಗಂಧದ ಮರಹುಟ್ಟಿ
ಕಿರಿಟದೊಳಿರಡು ಗಿಳಿಕೂತು । ಓದ್ಯಾವ
ಹರಳಯ್ಯನೆಂಬು ಹಳೆಗಥೆಯ ೭

ಆರಾಣದಡಿವ್ಯಾಗ, ಆರು ಕಾಲಿನ ಮಂಚ
ನಾಗರ ಸರಪು ತೆಲೆಗಿಂಬು । ಶಿವಲಿಂಗ
ಹ್ಯಾಂಗ ಗವಿದಾವ ಸವನಿದ್ದೆ ೮

ಇಂಜಾಣದಡಿವ್ಯಾಗ, ಮಂಜ ಬಿದ್ದವ ತಾಯಿ
ಮಂಜಲ್ಲ ಮಳೆಯು ಸರುವಂದೆ । ಶಿವಲಿಂಗ
ಕೆಂಜಡೆ ಬಿಚ್ಯಾರ ಬಿಸಲೀಗೆ

ಹರೆಯ ಹೊತ್ತೀಲೆದ್ದು, ನರಿಯ ಮಾರಿಯ ಕಂಡೆ
ತಿರುಗಾಡದ ಕಂಡೆ ಪವಳ್ಯಾಗ । ಶಿವಲಿಂಗ
ಸಾಲ ಸಂಪೀಗಿ ವನದಾಗ ೧೦

ಗುಡ್ಡದ ಮಲ್ಲಯ್ಯ, ಗುಡಿಯೆಲ್ಲ ಬಂಗಾರ
ಹಾಸೀಗಿ ಗಲ್ಲು ಹವಳಾವು । ಮಲ್ಲಯ್ಯ
ಬೀಸಣಿಕೆಗೆಲ್ಲ ಬಿಡಿ ಮುತ್ತು ೧೧

ರಾಗಿ ಬಣ್ಣದ ಕುದುರಿ, ರಾಜೀಕ ದೊಡ್ಡದು
ರಾಜರೊಳುರಾಜ ಮಳೆರಾಜ, ಬರುವಾಗ
ರಾಜೀವ ಕೈಯ ಮುಗಿದಾವ ೧೨

ಕೆಂದಗುದುರಿಯನೇರಿ, ಕೆರಿಯಾಗ ನಿಂತವನ್ಯಾರ
ಅಂಜತೀನಯ್ಯ ಹೆಸರ್ಹೇಳ । ಲೋಕ್ವದ
ಮಂಜಿನಾಗಿರುವ ಮಳೆರಾಜ ೧೩

ಹಚ್ಚನ್ನ ಹರಿನಾಮ, ಮುತ್ತಿನ ಗೋಪಾಳ
ಹೊತ್ತೇರಿ ಬರುವ ಇವನ್ಯಾರ, ಕೆರೂರ
ಗಚ್ಚಿನ ಗುಡಿಯ ಕರಿಹನುಮ ೧೪

ಕಪ್ಪೂರ ಬೆಳಕೀಲೆ, ಗುಗ್ಗೂಳ ಹೊಗೆಯ್ವಲಿ
ಅಪ್ಪ ರಾಚಣ್ಣ ಬೆವತಾನ, ಪೂಜ್ಯಾರಿ
ಮುತ್ತೀನ ಚೌರಿ ನೀ ಬೀಸೊ ೧೫

ಏಳ ಯಲ್ಲವ ತಾಯಿ, ಎಷ್ಟೊತ್ತ ಮಲಗೀವೆ
ಹೂವೆಂಜಲಾಗಿ ಹುಳಮುಟ್ಟಿ, ಕೊಳ್ಳದ
ನೀರೆಂಜಲಾಗಿ ಗಿಳಿ ಕುಡಿದು ೧೬

ಶರಣರ ನೆನದಕ್ಕರ, ಸರಗೀಯ ಇಟ್ಹಾಂಗ
ಅರಳೆ ಮಲ್ಲೀಗಿ ಮುಡಿದ್ಹಾಂಗ, ಕಲ್ಯಾಣ
ಶರಣರ ನೆನೆಯೊ ಎಲೆ ಮನವ ೧೭

ದೈವ ದೇವರ ಹಂತಿ, ಭವದೊಳಗೆ ನಮ್ಹಂತಿ
ತೇದುಂಡ ಹಂತಿ ನಂಬಾಳು । ಒಕ್ಕಲಿಗ
ಕೋದ ತೆನಿಹಂತಿ ಜನುಮಾಕೊ ೧೮

## ಬಸವಣ್ಣ

ಬಾಗೇವಾಡಿ ಬಸವ, ಬಹಳ ದೊಡ್ಡವನೆಂದು
ಬೆಳ್ಳಿಯ ಮಗಡ ಮಾಡ್ಸೆನೊ । ಬಸವಣ್ಣಾ
ಹೊನ್ನ ಹಣಿಕಟ್ಟಿ ಬಿಗಿಸೇನೊ ೧

ಚೆಂದುಳ್ಳ ಪಟ್ಟದಕಲ್ಲು, ಇಂಬುಳ್ಳ ಗುಡಿಯಾಗ
ಮಂದಾನ ಬಸವ ಮಲಗ್ಯಾನ । ಗುಡಿ ಮುಂದ
ಕಂದನ ಬೇಡವರು ಕಡೆಯಿಲ್ಲ ೨

ಕುಂಟೋಜಿ ಬಸವಣ್ಣಾ, ಬಂಟಾಗಿ ಕಾದಾಡಿ
ಕುಂಟಾದ ಕಾಲ ಮುರಕೊಂಡು । ಪರಿಸ್ಯಾಗ
ಮಂಟಪದ ಮುಂದ ಮಲಗ್ಯಾನ ೩

ಕೋಲೆನ್ನಿರೆ ಸೀಗೀಗೆ, ಕೋಲೆನ್ನಿರಿ ಗೌರೀಗೆ
ಕೋಲುಕಲ್ಯಾಣ ಬಸವಾಗ । ಬಲಗೊಂಡ್ರ
ಬಾರದ ಹಾಡು ಬರತಾವ ೪

ಭೂಮಿ ಹುಟ್ಟಿದ ಮೊದಲು, ಭೂಮಿ ಕಟ್ಟಿದ ಮೊದಲು
ಭೂಪ ಹುಟ್ಟೀದ ಬಸವಯ್ಯ, ಮ್ಯಾಗೀನ
ಶಿವಗೇಳು ದಿನಕ ಹಿರಿಯಾನ ೫

ಕಟ್ಟಿಕಟ್ಟಿದ ಮೊದಲು, ಕಲ್ಯಾಣ್ಹುಟ್ಟಿದ ಮೊದಲು
ಬಲ್ಲಿದ್ದುಟ್ಯಾನ ಬಸವಯ್ಯ । ಮ್ಯಾಲೀನ
ಶಿವಗೇಳು ದಿನಕ ಹಿರಿಯಾನ ೬

ಹಾದಿಮಣ್ಣಾನು ತಂದು, ಗೀರ ಬಸವನ ಮಾಡಿ
ಹೋರೆನ್ನಬಹುದೆ ಬಸವಯ್ಯ, ನಿಂಪಾದ್ಕ
ನಾಣೇವನುಟ್ಟು ಶರಣಂಪೆ ೭

ಕಟ್ಟಿ ಮಣ್ಣಾನು ತಂದು, ಕೆತ್ತಿ ಬಸವನ ಮಾಡಿ
ಎತ್ತೆನ್ನಬಹುದೆ ಬಸವಯ್ಯ । ನಿಂಪಾದ್ಕ
ಪಟ್ಟೊಳ್ಳಿ ಇಟ್ಟು ಶರಣಂಪೆ ೮

ಆಗಾಸದಡಿವ್ಯಾಗ, ಧೂಪದ ಹೊಗೆಯೆದ್ದು
ಭೂಪ ಬಸವಯ್ನ ಶಿವಪೂಜೆ, ಆಗುವಾಗ
ಆಗಾಸ ಘಂಟೆ ಢಣಲೆಂದು

ತುಂಬೀದ ಹೊಳಿಯಾಗ, ಕೊಂಬ ಕಾಣಿಸತಾವ
ಬಂಗಾರದಿನಿಯು ಬಸವಣ್ಣ । ಬರುವಾಗ
ತುಂಬೀದ ಗಂಗೆ ತುಳಿಕ್ಯಾಳ ೧೦

ಏರಬಾರದ ಗುಡ್ಡ, ಹ್ಯಾಂಗೇರಿದಿ ಬಸವಣ್ಣ
ಬೋರಂಗಿ ಪಕ್ಕ ಸರಜಂಗು । ಕಟಿಗೊಂಡು
ಏರಿ ಮೇದಾನೊ ಎಳೆ ಹುಲ್ಲೊ ೧೧

ಕಂಡಿರೆ ನಂಬಸವನ, ಪುಂಡತನ ಗೋಳೆಲ್ಲ
ಹೆಂಡ್ಕೀಯ ಒಡೆದು ಬರತಾನ । ಬಸವಯ್ನ
ಕೋಡಿನ ಮ್ಯಾಲೆ ಕೈಲಾಸ ೧೨

ನೋಡಿರಿ ನಂಬಸವನ, ಕೋಡೊಳಿ ತನವಾನ
ಗೋಡಿsಯು ಒಡೆದು ಬರತಾನ । ಬಸವಯ್ಯ
ಇನಿಯ ಪ್ಯಾಲ್ಯೆತಿ ಕೈಲಾಸ ೧೩

ಎರಗಿ ನೋಡುನು ಬಾರ, ಹಿರಿಯಗಸಿ ಬಸವಾನ
ಸರಗೋಳ ಗಂಟಿ ಹುರಗೆಜ್ಜಿ । ನಂಬಸವ
ಚೆಲುವಾನ ನೋಡ ಮರತೇಕ ೧೪

ಹೊಕ್ಕು ನೋಡುನು ಬಾರ, ಚಿಕ್ಕಗಸಿ ಬಸವಾನ
ಒಕ್ಕಳ ಗಂಟೆ ಹುರಗೆಜ್ಜೆ । ನಂಬಸವ
ಸುತ್ತ ಮರತೇಕ ಬಲು ಚೆಲುವ ೧೫

ಎತ್ತ ಕಾಯುವಣ್ಣಾ, ಸಮ್ಯೆತ್ಯ ಕಂಡೇನೊ
ಮುತ್ತೀನ ಹಗ್ಗ ಮುಗುವಾಣ । ಹಾಕ್ಯೊಂಡು
ಹುತ್ತೀನ ಕೆಳಗ ಮಲಗ್ಯಾನೊ ೧೬

ಕಟ್ಟೀಯ ಹೊಲಗಳ, ಮೆಟ್ಟಿದಿರು ಬಸವಣ್ಣಾ
ಮಕ್ಕಳಂದಿಗರ ಬಡಬಗರ । ಹೊಲಗsಳ
ಮೆಟ್ಟಿದಿರು ಚೆನ್ನ-ಬಸವಣ್ಣಾ ೧೭

ಕರಿಯ ಕೋಡಿನ ಬಸವ, ಕೆರೆಯಾಗ ಹ್ಯಾಂಗಿದ್ದೊ
ಕೆರಿ ಬತ್ತಿ ಕೆರಿಯ ಮಳಲೊತ್ತಿ । ಬಸವಾನ
ಕರದ ಬಾಡ್ಯಾವ ಬಿಸಲೀಗೆ ೧೮

ಕೆಂಪ ಕೋಡಿನ ಬಸವ, ತಂಪಿನಾಗ್ಹ್ಯಾಂಗಿದ್ದ್ಯೊ
ತಂಪೊತ್ತಿ ತಂಪ ಮಳಲೊತ್ತಿ, ಬಸವಾನ
ಕೆಂಪು ಬಾಡ್ಯಾವ ಬಿಸಲೀಗೆ ೧೯

ಕೌಜಗನ ತತ್ತ್ಯಾಗ, ಹ್ಯಾಂಗಿದ್ದಿ ಬಸವಯ್ಯ
ಎಂದೆಂದಿಗಿ ಪೂಗಿ ಮಳಿಗಾಲ । ಮಂಜಿನಾಗ
ಹ್ಯಾಂಗಿದ್ದಿರಿ ಚೆನ್ನಬಸವಯ್ಯ ೨೦

ಹರಿವ್ರೂಪ ಹಳದಾಗ, ಡುರಿಕೆಂತ ಬರವ್ರೂರ
ಚಿಟಿಗೊಳಗ ಬಾಲ ಮುಳಗದಲೆ। ಬರುವಂಥ
ಬಂಟ ಚಿಂಚಲಿ ಬಸವಯ್ಯ ೨೧

ತುಂಬೀದ ಹೊಳಿಯಾಗ, ಅಂಬಾಂತ ಬರವ್ರೂರ
ಹಿಂದೀನ ಬಾಲ ಮುಣಗದಲೆ। ಬರುವಂಥ
ಧೀರ ದೇಗಲೊಳ್ಳಿ ಬಸವಯ್ಯ ೨೨

ಕಡಲಿಕಾಳನು ತಿಂದ, ಮಡುವಿನ ನೀರ ಕುಡಿದ
ಕಡೆಯ ಬಾಗಿಲಕ ಡರಕೀಯ। ಹೊಡಿವಂಥ
ವೀರ ಕಾದ್ರೊಳ್ಳಿ ಬಸವಯ್ಯ ೨೩

ಉದ್ದಿನ ಕಾಳ ತಿಂದು, ತೆಗ್ಗಿನ ನೀರ ಕುಡಿದು
ಹೆಬ್ಬಾಗಿಲದಾಗ ಡರಕೀಯ। ಹೊಡಿವಂಥ
ಚೆಲುವ ಹುಂಡೇದ ಬಸವಯ್ಯ ೨೪

ಕಡಲಿಕಾಳನ್ನಟು, ಕಟಿದಾರ ನಂಬಸವನ
ಕಡಲಿ ನಮ್ಮಲ್ಲಿ ಅಪರೂಪ। ಬಸವಯ್ನ
ಕಟಿದಾರ ಕಲ್ಯಾಣ ಮಟದಾಗ ೨೫

ಉದ್ದಿನ ಕಾಳ್ನಟು, ತಿದ್ಯಾರ ಬಸವಯ್ನ
ಉದ್ದು ನಮ್ಮಲ್ಲಿ ಅಪರೂಪ, ಬಸವಯ್ನ
ತಿದ್ಯಾರುಳುವೀಯ ಗುಡಿಯಾಗ ೨೬

# ಸಂಗಮನಾಥ

ಸಂಗಮಕ ಹೋಗಾಕ ಸಂಗಾಟ ಮಗ ಬೇಕ
ತಂಬಿಗಿ ಹಿಡಿಯಾಕ ಸೊಸೆ ಬೇಕ, ಈ ಮನಕ
ನಂಬಿಗಿ ಬೇಕ ಶಿವನಲ್ಲಿ ॥ ೧

ಮಲ್ಲಿಗ್ಹೂವಿನ ದಂಡಿ ಅಲ್ಲಿಟ್ಟಿ ಇಲ್ಲಿಟ್ಟಿ
ಕಲ್ಲಮ್ಯಾಲಿಟ್ಟಿ ಕೈಬಿಟ್ಟಿ । ಕೂಡಲಸಂಗ
ಪಲ್ಲಕ್ಯಾಗಿಟ್ಟಿ ಹಿಡಿಹೊನ್ನ ॥ ೨

ದೇವರಿಗಿ ಮಾಡಿದರ ದಾವುತಿ ನಮಗಿಲ್ಲ
ದಾರಿಯು ನಡೆದರ ದಣುವಿಲ್ಲ । ಸಂಗಯ್ಯ
ಹಾವು ಕಚ್ಚಿದರ ಇನವಿಲ್ಲ ॥ ೩

ಅಕ್ಕನ ಕರೆಹೋಗಿ ಇಪ್ಪತ್ತ ದಿನ ತಡೆದ
ಅಕ್ಕನಾಗನ ಕರೆಹೋಗಿ । ಕೂಡಲಸಂಗ
ರಕ್ಕನಗಿ ಮುಂದ ಸೆನೆದಾನ ॥ ೪

ತಂಗಿ ಕರೆಯಾಕ ಹೋಗಿ, ತಿಂಗಳ ತಡೆದಾನ
ತಂಗಿ ಬೋರಮನ ಕರೆಹೋಗಿ । ಸಂಗಯ್ಯ
ತಂಗಡಗಿ ಮುಂದ ನೆನದಾನ ॥ ೫

ಸಂಗಯ್ಯನ ಗುಡಿ ಮುಂದ ನಿಂಗಮುದ್ದರಿ ಕಲ್ಲ
ಗಂಗವ್ವ ಮುಂದ ಹರಿದಾಳ । ಸಾ ಹೋಗಿ
ಹೊಂದಿಸಿ ಕೈಯ ಮುಗಿದೇನ ॥ ೬

## ಮಲ್ಲಯ್ಯ

ಪರವೂತವೆಂಬೂದು ಅರವತ್ತು ಗಾವೂದ
ಬರಲಾರೆನಯ್ಯ ಬಹುದೂರ । ನಿನ ಮುಡುವ
ಬರುವವರ ಕೂಡ ಕಳುಹೇನೊ ॥ ೧

ಹರಿಯೂಗ ಏಳುತಲಿ, ಹರನಿನ್ನ ನೆನೆದೇನ
ಪಾತಾಳಗಂಗ್ಯಾಗ ಜಳಕಾವ । ಮಾಡುವಂಥ
ಮಲ್ಲಿಕಾರ್ಜುನನ ನೆನೆದೇನ ॥ ೨

ಸಂಗಯ್ಯನಿರುವೂದು ನಾಲ ಹುಣಸಿಯ ಮರ
ಸಂಗಯ್ಯನ ತಮ್ಮ ಗಿರಿಮಲ್ಲ । ಇರವೂದು
ತಿಂಗಳದ ದಾರಿ ಪರವೂತ ॥ ೩

ಪರ್ವತಗ್ಹೋಗಬೇಕಂತ, ಪರಸಿ ತಯಾರ ಮಾಡಿ
ಬೆರಿನ್ಯಾಳ ಬ್ಯಾಳಿ ನೆನಗಡಲಿ । ಪರವುತದ
ಪರಸಿಗ್ಹಂಚಾಳ ಪನಿವಾರ ॥ ೪

ಪಲ್ಲಕ್ಕಿ ಕೊಟ್ಟ್ರ ಮಲ್ಲಯ್ಯ ಒಲ್ಲೆಂದ
ಮಲ್ಲಿನೆಂಬೂವ ಮರಿಗುದರಿ । ಕೊಟ್ಟ್ರ
ಮೆಲ್ಲಕ ಮಟವ ನಿಳಿದಾನ ॥ ೫

ಪರವೂತ ಗಿರಿಮ್ಯಾಲೆ ಪಂಚಾಳ ಮರಹುಟ್ಟಿ
ಪಾತಳಕ ಬೇರ ಇಳಿದಾವ । ಆ ಬೇರು
ಬೋರಮಗ ನೆರಳ ಗವಿದಾವ ॥ ೬

ಪರವೂತ ಗಿರಿಮ್ಯಾಲೆ ಅರಿದೊಂದು ಕಂಡೇನೊ
ಕರಿಯುಗಂಡ್ಯಾಳಿ ಮುಂದ್ಹೋಡಿ । ಬಿತ್ಯಾರ
ಮಲ್ಲಯ್ಯ ಮುಡಿವ ದವನವ ॥ ೭

ಪುಂಡ ಪರವ್ರತಮಲ್ಲ ಗಂಡಮಗನ ಕೊಡು
ಚೆಂಡೂಹಿವಿನಂತ ಸೊನೆದೇರಿಗೆ । ಕೊಟ್ಟ್ಯಾರ
ಪುಂಡ ನಿನ ಗಿರಿಗೆ ಬರುವೆನು ॥ ೮

ಚಿಂತಿ ಬಿಡಿಸೊ ನನ್ನ ಕಾಂತಿಪರವ್ರತಮಲ್ಲ
ಚಿಂತ್ಹೋಗಿ ನನಗ ಸೌಭಾಗ್ಯ । ಕೊಟ್ಟ್ಯಾರ
ಕಂಬಿಗೆ ಮುತ್ತ ಬಿಗಿಸೇನೊ ॥ ೯

ಮಲ್ಲಯ್ಯಗ್ಹೋದವರು ನಿಲ್ಲದಲಿ ಬಾರರ
ಅಲ್ಲಿ ರಾಜೋಟಿ ಶರಬಾಗ । ಹೋದವರು
ಪೆಲ್ಲೇವ ಬಿತ್ತಿ ಬೆಳೆದಾರ ॥ ೧೦

ಕಂಬಿಯ ಹೊತ್ತಣ್ಣ ಇಂಬಾಗಿ ಹಾಯಣ್ಣ
ಕಂಬಿ ಕಂಬಿಗೆ ಕದಲ್ಯಾವ । ನಮನಿಮಗ
ಡಂಬಿ ತಾಗ್ಯಾವೊ ಗಿರಿಯಾಗೊ ॥ ೧೧

ಕಂಬಿಯ ಹೊತ್ತಣ್ಣ ಕಂಬಿ ಕಾವಡಿ ಜೋಕೆ
ಅನಗಾಡ ಹಾದಿ ಅವಜೋಕೆ । ಕಂಬ್ಯಯ್ಯ
ಗಿರಿಯಿಳಿಯುವುಂದ ಜೀವ್‌ಜೋಕೆ ॥ ೧೨

ಕಂಬಿ ಹೊತ್ತಣ್ಣನ ತಂಗೇನು ಉಟ್ಟ್ಯಾಳ
ಲಿಂಬಿ ಪಪ್ಪಳ ಜರತಾರೊ । ಉಟಗೊಂಡು
ಕಂಬಿಗಾರುತಿ ಬೆಳಗ್ಯಾಳೊ ॥ ೧೩

# ದೊಡ್ಡ ಹಾಡುಗಳು

## ನರಗುಂದ

ಹೆಸರೀಗೆ ನರಗುಂದ, ಮೊಸರೀಗೆ ನೀರಿಲ್ಲ
ಕುಸುರದ ಸಿಂಬಿ ಬರಿಗೊಡ । ಇಟಗೊಂಡು
ಉಸರಂತ ಬಾವಿ ಇಳಿದಾರೊ ೧

ನರಗುಂದ ಕಾಳವನ, ಮರಿಗುದರಿ ಸಾಯ್ತಲಿ
ಚದರಂಗ ಮಾಲ ಮುರಿಯ್ತಲಿ । ಸೊರಟೂರ
ನದರೀಗೆ ಸುದ್ದಿ ಹರಿಯ್ತಲಿ ೨

ನರಗುಂದವೆಂಬೂದು, ಅರಗಿಣಿ ಪಟ್ಟಣ
ಕೆರೆ ಕಡಿಸಿ ನೀರ ಕುಡಿಲಿಲ್ಲ । ಬಾಬಣ್ಣಾ
ತಿರುಗಿ ನರಗುಂದ ಹೊಗಲಿಲ್ಲ ೩

ಕೆಂಪು ಮಾರಿಯ ದಂಡು, ಗುಂಪಾಗಿ ಮುತ್ತ್ಯಾರೊ
ಕಂಪೀಸಿಹೋತೊ ನರಗುಂದೊ । ಬಾಬಸಾಬ
ಹಂಪಿಹೊಳಿ ಮುಂದ ತಡವ್ಯಾನೊ ೪

ಹಂಡಬಂಡದ ಕುದುರಿ, ಗೊಂಡೆ ಲಾಗಾಮನ್ಹಾಕಿ
ದಂಡು ಇಳದೀತೊ ನರಗುಂದೊ । ಬಾಬಾಸಾಬ
ಗುಂಡಿಲಿಕ್ಕ್ಯಾನೊ ಗುಡಿಯಾಗೊ ೫

ವಿಣ್ಣ್ಯಾ ತಾಂಡೆದ ಬಂಟ, ಕಣ್ಣಿಟ್ಟ ಸಿರಕೊಯ್ದ
ಮಣ್ಣ ಪಾಲಾದ ಮೋಣನನ್ನ । ನರಗುಂದ
ಅಣ್ಣ ಕೂಗ್ಯಾನೊ ಕಾಳಗೊ ೬

ಮುಂಡರಗಿ ಭೀಮಣ್ಣಾ, ಬಂಡಾಯ ಎಬ್ಬಿಸಿದ
ದಂಡ ಕೂಡ್ಯಾನೊ ನರಗುಂದ । ಬಾಬಣ್ಣಾ
ಕೆಂಡ ಕಾರ್ಯಾನೊ ಕುಂಪಣಿಗೊ ೭

ಮಾಲಕಮಸಾಹೇಬ, ಕೇಳಿ ಮೋಣನನ ನಾವ
ಗಾಳಿ ಬಂದ್ಹಾಂಗ ಮುತ್ತ್ಯಾನೊ । ನರಗುಂದ
ತಾಳ ಬನ್ಹಾತೊ ಚಣಾವಾಗೊ ೮

ಬಾಪು ವಂತರ ನಂಚು, ಘಾತ ನರಗುಂದಾತೊ
ಹೋತೊ ಹಾಳಾಗಿ ನಿಪ್ಪತಗಿ । ನರಗುಂದ
ಖ್ಯಾತಿ ಜನದಾಗ ಕಡೆತನಕ ೯

ಹಾರೂರು ಹಾವಾಗಿ ಕೋರ್‍ಯಾರೊ ಒಳನಂಚು
ಗಾರಗಾರಾತೊ ನರಗುಂದೊ । ಬಾಬಾಸಾಬ
ಕಾರ ಮಳಿಯಾಗ ಮನಿಬಿಟ್ಟ ೧೦

ಕಾಡೆಲ್ಲ ಕತ್ತರಿಸಿ, ನಾಡೆಲ್ಲ ತತ್ತರಿಸಿ
ಬಾಡುಗಳ್ಳರು ಹಾರೂರ । ತಾ ನಂಬಿ
ಕಾಡಿಗೀಡಾದ ಬಾಬಣ್ಣ ೧೧

ಮಡದಿ ಮಕ್ಕಳ ಬಿಟ್ಟ, ಹಡದ ತಾಯಿಯ ಬಿಟ್ಟ
ಕಡೆಗಾತ ಬಿಟ್ಟ ನಾಡಾಸೆ । ಬಾಬಾಸಾಬ
ಕೇಡೀಗೆ ಬಿಟ್ಟ ನರಗುಂದ ೧೨

ದೇಶವ ಕಡೆಮಾಡಿ, ಆತ್ಮಗೆ ಈಡಾಗಿ
ಕಾಸು ಕವಡಿಗೆ ಕಡೆಯಾಗಿ । ಹಾರೂರು
ಹಾಸಿ ಬೆಂಕ್ಯಾಗ ಬೂದ್ಯಾಗಿ ೧೩

ನರಗುಂದ ಅರಸನಿಗೆ, ವನವಾಸ ಬಂದೀತೊ
ತಿರುಗ್ಯಾನೊ ಕಾಡ ಪಾಲಾಗಿ । ಸೂಟೆರಗ
ತೊರಗಲ ಸಿಮ್ಯಾಗ ಕೈಸಿಕ್ಕೊ ೧೪

ಮಾಳಿಮ್ಯಾಗಿನ ಹುಲ್ಲ, ಗಾಳಿಗ್ಹಾರಿದರೇನು
ಗಾಲ ಮೇಲಾತೊ ನರಗುಂದೊ । ಬಾಬಾಸಾಬ
ಗಾಳೀಗಿ ಬಾಯ ಬಿಡತಾನೊ ೧೫

ಹೂಲಿ ಸಾಮಿಯು ಕೊಟ್ಟ, ಕೋಲ ಮಿಂಚಿನ ಸಾಪ
ಗಾಲ ಮೇಲಾತೊ ನರಗುಂದೊ । ಪುರುವರುಷ
ಕೂಲಿ ಕುಂಬಳಿಗೆ ಎರುವಾತೊ ೧೬

## ಕಂಪಲಿ

ಹಂಪಿಯು ಶರಣರಿಗೆ, ಸಂಪಾದ ಪಟ್ಟಣ
ಕಂಪಲಿಯು ನೆರಳು ಶರಣರಿಗೊ । ತುರುಕರಿಗೆ
ಕಂಪನವು ಕೇಳಿ ಎದೆಯಾಗೊ ೧

ಕಂಪೈಲಿ ರಾಯೈಗ, ಹಂಪಿ ವಿರುಪನ ಶಾಪ
ದಂಪತಿಗೆ ಬಂತೊ ವನವಾಸೊ । ಕಂಪಲಿಯು
ಸಿಂಪಾಗಿ ಸಿಡಿದು ಹಾಳಾತೊ

ಬೆಚ್ಚಪ್ಪ ಲಿಂಗಯ್ಯ, ಹೆಚ್ಚಿನೈ ಮಂತ್ರಿಗಳು
ರೊಚ್ಚಿನೈ ಕತ್ತಿ ರಣ ಕಟ್ಟಿ । ತುರುಕೈರು
ಹುಚ್ಚೆದ್ದು ಓಡಿ ರಣಬಿಟ್ಟು

ಮಾನವನೆ ಕಳಕೊಂಡು, ಬಾನರೋಡಿದರಂದು
ಖೂನಿ ಮಾಡುವದಕೆ ಮಾತಂಗಿ । ಹೆಣ್ಣಿದೆ
ಮಾನಗೇಡ್ಯಾಗಿ ಒಳಸಂಚು

ಕೊಂಕಣದ ಮಾತಂಗಿ, ಬಿಂಕ ಮಾದರ ಹುಡುಗಿ
ಕೊಂಕ ಗುಣ ಹೆಣ್ಣು ತುರುಕರಿಗೆ । ಮನಸೋತು
ವುಂಕಿ ಹಾಕ್ಯಾಳೊ ಕಂಪಲಿಗೊ ೫

ರಾಮರಾಯನು ಬಿದ್ದ, ನಾಮ ನಿರ್ನಾಮಾತೊ
ಧೂಮಧೂಮಾತೊ ಕಂಪಲಿಯೊ । ನಾರೇರ
ಹೇಮಕೊಂಡೊತಾ ಕಿಚ್ಚಾತೊ

ಏಳು ರಾಯರ ಗಂಡ, ಗಾಳೆರಿಗೆ ಕಾಟಣ್ಣ
ತಾಳವಲಿ ಕೊಂದ ಮಾತಂಗಿ । ಒಡೆಯಾಗ
ಕಾಳಗದಿ ಕಾದು ರಣಕಾದ

ಕಂಪ್ಲಿ ಹಾಳಾಗಿ, ಕೊಂಪೆಯಾಯಿತು ನಸಿಬ
ಸಂಪತ್ತು ಹೋತು ತುರುಕರಿಗೊ । ಲಿಂಗಯ್ಯ
ಜಂಪಿಲ್ಲ ಮಡಿದ ರಣದಾಗೊ ೮

## ವಿಜಯನಗರ

ಬನ್ನೀಯ ಮರಹುಟ್ಟಿ, ಹೊನ್ನಿನ ಮಳೆಗರೆದು
ಚೆನ್ನಪಟ್ಟಣಕ ಹೊಳೆ ಹರಿದು । ಹಂಪ್ಯಾಗ
ಬನ್ನಾಣ ವೀರರು ಗುಟ್ಟ್ಯಾಗೊ ೧

ಹುಕ್ಕ ಬುಕ್ಕರು ಕೂಡಿ, ಚಿಕ್ಕ ರಾಜ್ಯವ ಕಟ್ಟಿ
ಮಿಕ್ಕ್ಯಾರೊ ಸುತ್ತ ನಾಡಾಗೊ । ಹಂಪೆಯ
ಅಕ್ಕರದಿ ವಿರಪಾಕ್ಷ ವರ ಕೊಟ್ಟೊ ೨

ಲಕ್ಕಣ ದಂಡೇಶ, ಚಕ್ಕಣಾಚಾರ್ಯರು
ಮುಕ್ಕಣ್ಣ ಕಳಿಸೀದ ವೀರರೊ । ಪ್ರೌಢಣ್ಣ
ಚೊಕ್ಕಾಗಿ ರಾಜ್ಯ ಬೆಳಿಸಿದರೊ ೩

ವಿಜಯನಗರದ ರಾಮ, ಗಜದ ಅಂಬಾರಿನೇರಿ
ತಜಪಿಜಲಿ ತಲುಪಿ ತಂಗಡಗಿ । ಸಿರಸಂಗಿ
ಸರದಾರ ತಿವಿದ ಈಟ್ಯಲಿ ೪

ಪಂಚಶಾಹಿಗಳೆದ್ದು, ಕಂಚಾಣ ಹುಡುಕತಲಿ
ಸಂಚ್ಯಲಿ ನಾಡ ನುಂಗ್ಯಾರೊ । ಐಸಿರಿಯು
ಹಂಚಿ ಹಂಚಾಗಿ ಮಣ್ಣಾತ್ರೊ ೫

## ಕಿತ್ತೂರು

ಕಾಡಾನೆ ಕಾಡಯ್ಯ, ಬ್ಯಾಡರ ಬೀಡಯ್ಯ
ನಾಡಾಗಿ ಮಾಡಿ ಮಲ್ಲಣ್ಣ, ಕಿತ್ತೂರ
ಗೂಡೀಗೆ ಗುಡಿಯ ನೇರಿಸಿದೊ ೧

ಬಣಜೀಗ ಮಲ್ಲಣ್ಣ, ಜನದಾಗ ಕಣಿಯಾದ
ಕುಣಿಸಿ ಲಕ್ಕಸಮಿ ನಾಡಾಗ । ಕಿತ್ತೂರ
ಕಣಜಾತು ಮುತ್ತು ಮಾಣಿಕದ

ಕಿತ್ತೂರ ಕಡೆಯರಸು, ಮುತ್ತು ಮಾಣಿಕದೊಡೆಯ
ದತ್ತಕ್ಕ ಮಗನ ಮಲಸಜ್ಜೊ । ಸಮುಸೂರ
ಸತ್ತ ಕಿತ್ತೂರ ಮುಟ್ಟುದಕೊ

ಹಾಲಗುಂಬಳ ಬಳ್ಳಿ, ಹಾದೀಗೆ ಹಬ್ಬ್ಯಾವ
ಹಾರೂರಿಗೆ ಬಂತೊ ದೌವಲತ್ತೊ । ಕಿತ್ತೂರ
ಮಲಸರ್ಜ್ಗ ಬಂತೊ ವನದೇಶೋ

ಸೊಗಲಂಬು ಊರಿಲ್ಲ, ಸಮುದರಕ ನೆಲೆಯಿಲ್ಲ
ಜ್ಯಾತ ಮುತ್ತಿನಗೆ ಬೆಲೆಯಿಲ್ಲ । ಕಿತ್ತೂರ
ಮಲಸರ್ಜನಂಥ ದೊರೆಯಿಲ್ಲ ೫

ರಂಗ ಕಿತ್ತೂರ ಮಾಲ, ಹೊಕ್ಕು ನೋಡುಣ ಬಾರ
ಮಾಲ ಮಾಲೆಲ್ಲ ಕನ್ನಾಡಿ । ಮಲಸರ್ಜ
ಮಾಲ ಕಟ್ಟೀಸಿ ಇರಲಿಲ್ಲೊ

ಕಿತ್ತೂರ ನೀಮಾಲ, ಮತ್ಯ್ಯಾರ ಕಟ್ಟಿಸ್ಯಾರ
ಮಕ್ಕಳ ತಂದಿ ಮಲಸರ್ಜ । ನಿಮ್ಮಾಲ
ಹೊಕ್ಕ ನೋಡ್ಯಾರ ಹೊಲಿಯಾರ

ಕಿತ್ತೂರ ಮಲಸಜ್ಜ, ಕಿಚ್ಚ್ಕ ಕಂಜವನಲ್ಲ
ದತ್ತಗೇಡೊಬ್ಬ ಮಗ ಹುಟ್ಟಿ । ಕಳೆದಾನೊ
ಹತ್ತ ತಲಿಗಂಡ ವತನಾವ ೮

ಕಿತ್ತೂರ ಮಲಸಜ್ಜ, ಯಾರಿಗಂಜವನಲ್ಲ
ಪಚ್ಚೇದ ಕಣ್ಣ ತಿರವೂತ । ಮಲಸರ್ಜ
ತಕ್ಕೊಂಡೆನೆಂದ ಹುದಲ್ಲಿಯ ೯

ಶಿವಲಿಂಗ ರುದ್ರನಿಗೆ, ನಾವುಕೂಡಲೆ ಬಂತು
ಜೀವ ಕಸವೀಸಿ ಚೆನ್ನವ್ವಗೊ । ಹಾರೂರು
ಹಾವಾಗಿ ಮನೆಗೆ ವಿಷ ಬಿಟ್ಟೊ ೧೦

ಮಡದೇರಿಬ್ಬರು, ಸಿಡಿದು ಕಡದಾಡಿ ಒಡಕ್ಹುಟ್ಟಿ
ತಡಮಾಡ್ದೆ ದತ್ತಕ ತಗೊಂಡು । ಚೆನ್ನಮ್ಮ
ಒಡತ್ಯಾಗಿ ನಾಡ ಆಳ್ಯಾಳೊ ೧೧

ಹಾಲಿನಂಥ ಕಿತ್ತೂರ್ಗೆ, ಹನ್ನೆರಡು ಕೀಲಗಸಿ
ಸುತ್ತ ಸುತ್ತೆಲ್ಲ ಕಿರಿಜಿಡ್ಡಿ । ಈರಪನ
ಕಿತ್ತೂರಿಗೆ ತಂದು ಇಳುವ್ಯಾರೊ ೧೨

ಕಂದವ್ನ ಹಡಿಲಿಲ್ಲ, ಕೈ ಬೀಸಿ ನಡೆಲಿಲ್ಲ
ಗಂಡನ ಪುಣ್ಯ ಉಣಲಿಲ್ಲ । ಈರವ್ವ
ರಂಡಿತನ ನಿನಗ ಮೂಲಾತೊ ೧೩

ಕನ್ನೂರ ಮಲ್ಲಗ, ತನ್ನಿ ಬ್ಯಾಸ್ಹತ್ತಲಿ
ಚೆನ್ನಮನ ರಾಜ್ಯ ನುಂಗಾಕೊ । ಥಾಕರೆಗ
ಗುನ್ನೆ ಮಾಡುದಕ ಪುನಲಿಟ್ಟೊ ೧೪

ಕಲ್ಲೂರ ಮಲ್ಲಗ, ಎಲ್ಲಾರು ಒದೆಯ್ಯಲಿ
ಗುಲ್ಲಾಗಂಟೇರು ಉಗಳ್ಯಲಿ । ಥಾಕರೆಗೆ
ಸಲ್ಲಾ ಕೊಟ್ಟಾನೊ ಮುತ್ತಾಕೊ ೧೫

ಧಾರ್ವಾಡದ ಪೆಂಕಾಟಿ, ದಾರಿಳಿಲಿ ಬರಕೊಂಡ್ಸು
ಕಾರಭಾರಿಗಳು ಕಿವಿಗೊಟ್ಟು। ಕಿತ್ತೂರು
ಚೂರು ಚೂರಾತೊ ಕದಸಾತೊ ೧೬

ಕಿತ್ತೂರ ಚೆನ್ನಮ್ಮ, ಸುತ್ತೂರ ಒಡತ್ಯಾಗಿ
ಕತ್ತಿ ಕವಚಗಳ ಉಡವುಟ್ಟೊ। ಅಬ್ಬರದಿ
ಬತ್ತಳಿಗಾದರೀಯು ಜಿಗದೇರೊ ೧೭

ಗಂಡನ್ನ ಕಳಕೊಂಡು, ಬೆಂಡಾದ ಚೆನ್ನಮ್ಮ
ಗಂಡಾಗಿ ರಣಕ ಇಳಿದಾಳೊ। ನಾಡನ್ನ
ಪುಂಡ ಬಂಡಾಯ ಹಿಂಡಾಕೊ ೧೮

ಧಾರವಾಡದ ದಂಡು, ವಾರ್‍ಯಾಗ ಬರುತಿರಲು
ಏರೀಯ ಹತ್ತಿ ಸುರಿಸ್ಯಾಸೊ। ಕಿತ್ತೂರ
ವೀರರೊಗೆದಾರೊ ಗುಂಡೀರೊ ೧೯

ಕೆಂಪು ಮೋರೆಯ ದಂಡು, ಚೆಂಪಾಗಿ ಸಿಡದೀತೊ
ರಂಪರಂಪೆಂದು ಓಡೀತೊ ಅಮಟೂರ
ಬಾಳು ಗುಂಡಿಟ್ಟೊ, ಥಾಕರೆಗೊ ೨೦

ಮುಚ್ಚಿನ ಕಾಳಗಕ, ಮೆಚ್ಚ್ಯಾಳೊ ಚೆನ್ನಮ್ಮ
ಉಚ್ಚಿ ಬೆಳ್ಳಿಗಳ ಕೊಡತಾಳೊ। ಬಂಟರಿಗೆ
ಹೆಚ್ಚಿನ ರೋಜ ಬರೆಸ್ಯಾಳೊ ೨೧

ಬೆಳಗಾವಿ ಚಿಪ್ಲಿನ್ನ, ಒಳ ಹಾದಿಲಿ ದಂಡೆತ್ತಿ
ಬೆಳಗಾಗಿ ದಂಡು ಬೀಡಿಟ್ಟೊ। ಕಿತ್ತೂರು
ತಳಮಳ ನೋಡೊ ಚಣದಾಗೊ ೨೨

ಹೊನ್ನು ಹಣಗಳನೀವೆ, ಮನ್ನಣೆ ನಿನಗೀವೆ
ಬೇಡಿದ್ದ ನೀವೆ ಗೋವಿಂದ। ಮನಸಿಟ್ಟು
ಮದ್ದಿಣಗೆ ಎಣ್ಣೆ ನೀ ಬೆರಿಸೊ ೨೩

ಲದ್ಮೀಯು ಗೋವಿಂದ, ಕುಪ್ಪಲಗೇತ್ತಾರೂಪ
ಪದ್ಮಿನಿಗೆ ಲದ್ಮಿ ಬಿರಿನ್ಯಾಸೊ । ನಸಿಬಾವ್ರೊ
ಬಿದ್ದು ಕಿತ್ತೂರು ಹಾಳಾತೊ ೨೪

ಕಸ್ತೂರ ಕಲ್ಲೂರ, ತುಲ್ಲರದು ಕಪಿತೂರಿ
ರಾಗಿ ಕೂಡಿಸಿದ ಹುಸಿ ತುದ್ದೊ । ಕಿತ್ತೂರ
ನಸಿಬ ಹಾರ್ಯಾವ್ರೊ ಹುಸಿ ಗುಂಡೊ ೨೫

ಕಿತ್ತೂರ ಕಿಲ್ಲೇಕ, ಉತ್ತ್ರಿಕರ್ಯಾರಿಲ್ಲ
ಉಕ್ಕಿನ ಗುಂಡು ಬಿಗಿವಾಗ । ಚೆನ್ನಮ್ಮ
ಹಕ್ಕ್ಯಾಗಿ ಬಾಯಿ ಬಿಡತಾಳ ೨೬

ಕಿತ್ತೂರ ಕಿಲ್ಲೇಕ, ಏಸೇಸ ಮುಸಲತ್ತ
ಉಕ್ಕಿನ ಗುಂಡ ಉರಿಬಾಣ । ಚೆನ್ನಮ್ಮ
ಅರಮನಿಗೆ ಬಾಣ ಬಿಡತಾರೊ ೨೭

ಜಮಖಂಡಿ ದೇಸಾಯಿ, ಯಮಕೇರಿ ಕೂಡಿನದ
ಸಮಯಕ ಚಿಪ್ಲಿನ್ನ ದಂಡಿನಗೊ । ಕಿತ್ತೂರ
ಸಮಸಾಗೈಸೀರಿ ಹೊತ್ತ್ರೊಯ್ದೊ ೨೮

ಎಂಥಾದ ಕಿತ್ತೂರು, ಚಿಂತ್ಯಾಗ ಬೆಳಗಾತ
ಕೆಂಪು ಮೋತಿವರು ಒಲಿಹೂಡಿ ಚೆನ್ನವ್ವ
ಚಿತ್ರದ ಮೂಲ ಮುರಿದಾರೊ ೨೯

ಕಿತ್ತೂರ ಕಿಲ್ಲೇಕ, ಹತ್ತು ಕಾಲ್ಕಿಚ್ಚಣಕಿ
ಕೊತ್ತ ಕೊತ್ತಲಕ ಕೈಪಂಜು । ಹಿಡಕೊಂಡು
ಸುತ್ತ ಚೆನ್ನವ್ವ ಹುಡಿಕ್ಯಾರೊ ೩೦

ಕಿತ್ತೂರ ಶರಸೂರಿ, ಮತ್ತೀನ ಹೇಳಲಿ
ಚಿತ್ತ್ರದ ಗೊಂಬಿ ಅಳತಾವ । ಚೆನ್ನವಗ
ಹಿಂಡೆಮ್ಮಿ ಹಸವು ಎಳಿಗಾರ ೩೧

ಕೆರಳ್ಯಿದ ಕೇಸರಣಿ, ಕಿತ್ತೂರ ಬಿಟಗೊಟ್ಟು
ಬತ್ತಲಗುದರೀಯ ಜಿಗದೇರಿ । ಹೊಂಗಲದ
ಗಡಿಯಾಗ್ವ್ಯೈರೀಗೆ ನೆರೆಯಾಗಿ ೩೨

ಕಿತ್ತೂರ ಶರಸೂರಿ, ಮತ್ತೇನ ಹೇಳ್ಯಲಿ
ಎತ್ತೊಂಟಿ ಮ್ಯಾಗ ಸದಲ್ಲೇರಿ । ಹೊಡೆದಾರೊ
ಮತ್ತ ಧಾರ್ವಾಡ ಕಿಲ್ಲೇಕೊ ೩೩

ಅತ್ತೆ ಸೊಸ್ತೆರ ತಂದು, ಮತ್ತ ಹೊಂಗಲದಾಗ
ಸುತ್ತ ಕಾವಲಿಯೊ ಹಗಲಿರುಳೊ। ಜನದಾಗ
ಎತ್ತ ನೋಡಿದರೂ ತಳಮಳೊ ೩೪

ಮುಕ್ಕಣ್ಣ ಗತಿಯೆಂದು, ಸಿಕ್ಕು ನೆರೆಯಾಗಿದ್ದು
ಬಿಕ್ಕಿ ಅಳತಾಳೊ ಈರವ್ವೊ । ರಾಯಣ್ಣ
ಅಕ್ಕ ನಿಮ್ಮುಪ್ಪು ಈ ರಾಯೊ ೩೫

ಗೆದ್ದು ಕಿತ್ತೂರ ತಂದು, ಉದ್ದ ಬೀಳುವೆ ತಾಯಿ
ಕದ್ದ ಮಾತಲ್ಲ ನಿಮ್ಮಾಣೆ । ಇಲದಿರಕ
ಬಿದ್ದ ಹೋಗೂವೆ ರಣದಾಗೊ ೩೬

ಸಂಗೊಳ್ಳಿ ರಾಯಣ್ಣ, ಹಂಗ್ಹರಿದ ದಳವಾಯಿ
ದಂಗೆ ಎಬ್ಬಿಸಿದ ನಾಡಾಗೊ । ಕಿತ್ತೂರ
ಕಂಗೆಟ್ಟ ಜನರು ಕೂಡ್ಯಾರೊ ೩೭

ಸುದ್ದಿ ಹಬ್ಬಿತು ಸುತ್ತ, ಎದ್ದು ಕೂಡಿತು ಮಂದಿ
ಗದ್ದಲಕ ಅಂಜಿ ಸರಕಾರ । ಈರವ್ನ
ಕದ್ದಿಲ ಕೊಂದಾರೊ ವಿಷ ಕೊಟ್ಟೊ ೩೮

ಬೆಳ್ಳಿ ಹರಿವಾಣದಾಗ, ಬಿಳಿ ಮುತ್ತು ಸುರಿದ್ಹಾಂಗ
ಚಂದ್ರಸಾಲಿಗೋಡಿ ಬಿರಿಯಾಲಿ । ಈರವ್ನ
ಕೊಂದವರ ವಂಶ ಹುರಿಯಾಲಿ ೩೯

ಖುದಾನ ಪುರದಾಗ, ಹೋದಾನೊ ರಾಯಣ್ಣ
ಭೇದವಿಡಲಿಲ್ಲ ಮನದಾಗ । ಲಿಂಗೊಂಡ
ವಾದಿ ರಾಯಣ್ಣ ಮೋನಾಗಿ ೪೦

ನಂದಗಡ ಊರಾಗ, ಮಂದ್ಯಾಗ ರಾಯಣ್ಣ
ತಂದು ಶೂಲಕ ಹಾಕ್ಯಾರೊ । ಕಿತ್ತೂರ
ಗೊಂದಲ ಶೂರಗ ದುರುಮರಣೊ ೪೧

ಹೊಂಗಲದ ಮಟದಾಗ, ಲಿಂಗ ಪೂಜೆಯ ಮಾಡಿ
ಭಂಗಾಗುದೆಂದು ಎದೆಗುಂದಿ । ಚೆನ್ನವ್ವ
ಉಂಗರ್ವಜ್ಜಿರ ನುಂಗ್ಯಾಳೊ ೪೨

# ಹೋಳಿಯ ಹಾಡುಗಳು

*** ಹೊರಮುಚುಕ:—**

ಹೋಳಿಯು ಭಾರತೀಯರಿಗೆ ಬಲು ಬುನಾದಿಯಿಂದ ಬಂದ ಸಂಪ್ರದಾಯ. ಶಿವ, ಕಾಮನ ಸುಟ್ಟ ನಿಮಿತ್ತವಾದರೂ ಕನ್ನಡಿಗರಿಗೆ ಹೋಳಿಯು ಪ್ರಾಪಂಚಿಕ ಮಾತಾಗಿ ಹಾಡುಗಳಲ್ಲಿ ಒಡಮೂಡಿದೆ. ಕೂಡಿದ ಸಭೆಯಲ್ಲಿ ಶಿವನು 'ಚಲುವನಾರೆಂದು' ಸವಾಲು ಹಾಕಲು ಪಾರ್ವತಿಯು 'ತ್ರಿಪುರ ಚೆಲುವನು ಕಾಮಣ್ಣ' ನೆಂದು ಉತ್ತರವೀಯಲು, ಶಿವನು ಸಿಟ್ಟಿಗೆದ್ದು ಕಾಮನನ್ನು ಸುಟ್ಟನೆಂದು ಹಾಡಿನಲ್ಲಿ ಬರುವುದು. ಇದೇ ಕನ್ನಡಿಗರ ಹೋಳಿಯ ಪ್ರಸ್ತಾವವಾಗಿದೆ. ಕನ್ನಡ ಹೋಳಿಯ ಹಾಡುಗಳಲ್ಲಿ ಬಿಡಿ ಪದ್ಯಗಳಿವೆ; ದುಂಡು ಮಲ್ಲಿಗೆ ಸೋಬಾನಗಳಿವೆ; ದುಂದುಮೆಯ ಮಾರುದ್ದ ಹಾಡುಗಳೂ ಇವೆ. ಶ್ಲೀಲ, ಅಶ್ಲೀಲ, ಉಚ್ಚತುಚ್ಛಸಿಂಗಾರಗಳ ಕಲಬೆರಿಕೆಯಾಗಿ ಪ್ರಪಂಚದಲ್ಲಿ ಕಾಮ ಭೀಮರ ಮಾತಾಗಿದೆ ಹೋಳಿ. ಹೋಳಿಯು ಗಂಡಿನ ಪಾಲಿಗೆ ಬಂದ ಒಂದೇ ಒಂದು ಹಬ್ಬ. ಅಂತೆಯೇ "ಹೋಳಿಯಾಡದ ನಾಡು ನಾಳನದೆ ಕಾಡಾತು" ಎಂದು ಗಂಡು ಹಾಡಿ ನಾಡು ಕಾಡಾಗಬಾರದೆಂದು ಪ್ರತಿ ವರುಷ ತಪ್ಪದೆ ಹೋಳಿಯನ್ನಾಡುವುದು.

---

* ಹೊರಮುಚುಕವು ಹಳ್ಳಿಗರ ನುಡಿಯಲ್ಲಿ 'ಅಂತರ್ದರ್ಶನ'; ಕೇವಲ ಸ್ಪರ್ಶದಿಂದ ಒಳನೆಲ್ಲ ತೋರಿಸುವ ಒಂದು ಗಿಡಮೂಲಿಕೆ.

# ಹೋಳಿ

ಹೋಳಿಗತ್ತು:— ಪಾರ್ವತಿ ಮಾದೇವ, ಏರಿನಬದಾಗಿರಲು
ಪಾರ್ವತಿ ಹೇಳ ಚೆಲುವ್ಯಾರ। ಕೇಳುದಕ
ತೀರ ಚೆಲುವಾನ ಕಾಮಣ್ಣ ೧

ಸಿಟ್ಟಿಗೇಳುತ ಶಿವನು, ಬಿಟ್ಟಾನೊ ಉರಿಗಣ
ಸುಟ್ಟು ಬೂದ್ಯಾದೊ ಕಾಮಣ್ಣ। ರತಿದೇವಿ
ಹೊಟ್ಟಿ ಬಡಕೊಂಡು ಅಳತಾಳೊ ೨

ಹೋಳಿ ಏರಿಕೆ:— ಅಳುವ ಬಾಲಿಯ ಕಂಡ, ಕಳವಳವೊ ಸಬದಾಗ
ಅಳಬ್ಯಾಡ ರತಿಯೆ ಮನೆ ನೊಸಿಯೆ। ಕಾಮಣ್ಣ
ಮನದಾಗ ಮೂಡಿ ಬರತಾನ ೩

ಹೊರಳಾಡಿ ಅಳಬ್ಯಾಡ, ಎರವಾದ ಕಿಚ್ಚೀಗೆ
ಕರೆದಾಗ ಬರುವ ರತಿದೇವಿ। ಮನದಾಗ
ಚಿರವಂತ ಕಾಮ ನೆನದಾಗ ೪

ಹೋಳಿಗತ್ತು:— ಮಳಲ ಬಿಂದಗಿ ಮಾಡಿ, ಜುಳುಕ ಹಾವಿನ ಸಿಂಬಿ
ಹೊಳೆಯ ತೆರ ಹೊಡೆದು ತುಂಬ್ಯಾರೊ।
ಎಳದೇರು
ತುಳಿ ತುಳಿದು ಹಾದಿ ಬರುವಾಗ ೫

ಮಳಲ ಬಿಂದಗಿ ಕರಗಿ, ಸುಳಿದು ಸಿಂಬಿಯ ಹಾವು
ಜಳತಾಕಿ ಕಾಮ ಸುಡುತಿರಲು। ಎಳದೇರು
ಅಳು ಅಳುಕಿ ಕಳಚಿ ಕೈಬಿಟ್ಟು ೬

ಹೋಳಿ ಏರಿಕೆ:— ಆನಿಗಂಬಾರಿ ಚಂದ। ಕುದುರ‍್ಯಾಗೆ ತಡಿ ಚೆಂದ
ಸದರ‍್ಯಾಗೆ ಚೆಂದ ಕಾಮಣ್ಣ। ಬಗಲಾಗ
ರೂಪಕ ಚೆಂದ ರತಿದೇವಿ ೭

ಕಾಮಣ್ಣ ಕಟ್ಟುತಲಿ, ಗೊನೆಮುಳ್ಳ ಸುರಿಯುತಲಿ
ಸೀತಾಳ ಬಾಂವಿ ತಗೆಸುತಲಿ । ನಮ ಕಾಮ
ಜೀತ ಹೋಗ್ಯಾನ ಶಿವನಲ್ಲಿ ೮

ಹೋ. ದುಂಡಮಲ್ಲಿಗೆ:— ಮಲ್ಲೀಗೆ ದುಂಡ ಮಲ್ಲಿಗೆ ॥ ಪ ॥
ಮಜಲೀಗೆ ಬಂದೀವಿ, ಮಾರಿಮಾರಿ ನೋಡಬ್ಯಾಡ್ರೆ
ತೋಡೀಗೆ ತೋಡಿ ಹಾಡಬೇಕ್ರೆ ಮ
ತೋಡಿಗೆ ತೋಡಿ ಹಾಡಬೇಕ್ರೆ, ಹುಡಗೇರ
ಓಡೋಡಿ ಮುಂದ ಹೋಗಬ್ಯಾಡ್ರೆ ಮ ೯

ಹೋಳಿಯ ಹಬ್ಬಕ, ಮೇಳಾಗಿ ಹಾಡೂನ
ಪಾಳ್ಯಾಗಬ್ಯಾಡ ನನ ಗೆಣತಿ ಮ
ಪಾಳ್ಯಾಗಬ್ಯಾಡ ನನ ಗೆಣತಿ ಬಂದಾರ
ಕೇಳಾಕ ಮಂದಿ ನಮ್ಹಾಡ ಮ ೧೦

ಹೋಳಿಗತ್ತು:— ಗಣಪತಿ ನಾನಿನ್ನ, ಚಣಚಣಕ ನೆನದೇನೊ
ಅಣ ಅಣಕ ಆಡು ಜನಕೆಲ್ಲ । ಬಾಯಾಗ
ತುಣತುಣಕ ಬೆಲ್ಲ ಒಗೆದ್ಹಾಂಗೊ ೧೧

ಬುದ್ಧಿ ಗಣಪತಿ ಮುಂದ, ಭೂಮೀಗೆ
ಫಲ ಮುಂದ
ಗುಡ್ಡಽಕ ಮುಂದ ಹುಲಿಯಪ್ಪ । ಮುಂದಿರುವ
ಗುದ್ದಿಽಗೆ ಮುಂದ ನರಿಯಪ್ಪ ೧೨

ಹೋಳಿ ಪದ:— ಅಕ್ಕ ಪಾರ್ವತಿ ಮಗನು, ಚಿಕ್ಕವನು ಗಣಪತಿಯೊ
ನೆಪ್ಪ ಮಾಡಿ ನಿನ್ನ ನೆನೆದೇನೊ । ಗಣನಾಥ
ತಪ್ಪಿದಲ್ಲೆನಗ ಬೆಸನಾಗೊ ೧೩

ಬೆನಕ ನಾಲಿಗಿ ಮ್ಯಾಲೆ, ನೆನಿಬಾರೊ ಹಾಡುದಕ
ಕಣಕಟ್ಟಿ ಮಂದಿ ಕೂಡ್ಯೈತೊ । ಕೇಳುದಕ
ಮನಕ ಬೆಸನಾಗೊ ನುಡಿನುಡಿಗೊ ೧೪

ಹೋಳಿ ಗೆ—ಪಲ್ಲೀಗೆ ದಾಂಡ ಪಲ್ಲೀಗೆ ॥ ಪ ॥
ಕೂತಿರು ಸಬದವರ, ನಿಂತಿರು ಸಬದವರ
ಚಿತ್ತಿಟ್ಟು ಕೇಳ್ರಿ ಸವ್ವಾಡ ಪ

ಚಿತ್ತಿಟ್ಟು ಕೇಳ್ರಿ ಸವ್ವಾಡ ಸಬದವರ
ಕೈಮುಗಿದು ನಾವು ಬೇಡ್ತೇವಿ ಪ ೧೫

ಹೋಳಿಗತ್ತು—ನಿಂಬೀಯ ಹಣ್ಣಾಂಗ, ತುಂಬಿತ್ತ ಮೈಬಣ್ಣ
ಹಂಬಾಲ ಬಿತ್ತ ನಿನಮ್ಯಾಲಿ। ಎಲೆ ಹೆಣ್ಣ
ನಂಬಿ ಬಂದೇನ ಮನಿತನಕ ೧೬

ಕಾಡೀಗಿಗಣ್ಣೀನ, ಕೂಡಿದ್ಹುಬ್ಬೀನ್ಹೆಣ್ಣ
ಬೇಡ್ಯಾವ ನಿನ್ನ ನನ ಜೀವ। ನಿನ್ನೋಡಿ
ಓಡಿ ಬಂದೀನೆ ಕೂಡುದಕ ೧೭

ಹೋಳಿ ಪರಿಕೆ:—ಹೆಣ್ಣೀನ ಈ ಹರೆಯು, ಹಣ್ಣೀನ ಗೊಂಚಲು
ಕಣ್ಣೀಲಿ ನೋಡಿ ಮನಬಾರ। ಬಡುವಂತ
ಕನ್ನೆರಿಲ್ಲೇನೊ ಮನಿಯಾಗೊ ೧೮

ತುಂಬು ಬಿಚ್ಚಿದ ಹಣ್ಣು, ತುಂಬ ಹರೆಯದ ಹೆಣ್ಣು
ತುಂಬಿ ಮನದಾಗ ರಸವೊಡೆದೊ। ಉಣಿಸುವ
ರಂಬಿ ಇಲ್ಲೇನೊ ಮನಿಯಾಗೊ ೧೯

ಪೋಳಿಗತು, ಮಾರೀಯ ನೋಡಿದರ ಮಾವುರದ ಬಂಗಾರ
ಸೀರಿ ನೋಡಿದರ ಜರತಾರ। ಎಲೆ ಹೆಣ್ಣ
ಯಾರ ಮನವನ್ನ ಸೆಳಿಯಾವ ೨೦

ಅಡ್ಡ ಗುಡ್ಡವು ಚೆಂದ, ದೊಡ್ಡರಳಿ ಮರ ಚೆಂದ
ಗಿಡ್ಡಿ ನಿನ ಕೈಗೆ ಬಳಿ ಚೆಂದ। ನನ ಗೆಣತಿ
ವಡ್ಯಾಣ ಚೆಂದ ನಡದಾಗ ೨೧

ಹೋಳಿ ಏರಿಕೆ:— ಜ್ಯಾತ ಮಲ್ಲೀಗಿ ಹೂವ, ಜಗ್ಗಿ ಕೊಯ್ಯೂವರೇನ
ಜಗ್ಗಿದರ ಮೊಗ್ಗಿ ಉಪರ್ಯಾವ। ಪರ ಹೆಣ್ಣ
ದಿಟ್ಟಿಸಿ ನೋಡಿ ಫಲವೇನ ೨೨

ಪೆರವರ್ಹೆಣ್ಣಿಗಾಗಿ, ಹೊರಗ ಮಲಗುವ ಜಾಣ
ಗಿಡದ ಮ್ಯಾಲೆರಡು ಗಿಣಿ ಕೂತು। ನುಡಿದಾವ
ಎರವನ್ನೊ ರಾಯ ನಿನ್ನ ಜೀವ ೨೩

ಹೋಳಿಗತ್ತು:— ಹೊಳಿಯ ದಂಡಿಯಮ್ಯಾಲೆ, ಎಳಿಯ
ಸವತಿಯ ಕಾಯಿ
ಹರಿಯಂದರ್ಲ್ಯಾಂಗ ಹರಿಯ್ತಲೆ। ಎಲೆ ಹುಡಗಿ
ಮರೆಯಂದರ್ಲ್ಯಾಂಗ ಮರೆಯ್ತಲೆ ೨೪

ಮೆಂಚಿಗಿ ಮ್ಯಾಲ್ಹತ್ತಿ, ಕೆಂಚ ಮೀಸಿಯ ತಿದ್ದಿ
ಹೊಂಚ್ಹಾಕಿ ಹೊಡೆದ ಕವಣ್ಯಿಯ। ನೆರೆ ಹೊಲದ
ಕೆಂಚಿ ಗುರಿ ಕಂಡು ಬೆರತಾಳೊ ೨೫

ಹೋಳಿ ಏರಿಕೆ:— ಕಾಕು ಹಾಕಿದ ಕಂಡು, ಬೇಕಾಗಿ ನಾ ಬಂದೆ
ಬಾರೊ ನನ ಗೆಣೆಯ ಬೈಲೀಗೆ। ನಾನೆಂದು
ಬಾನೆ ತಪ್ಪೊಂತ ಮಗಳಲ್ಲ ೨೬

ಚಳಿ ಜ್ವರ ಬಿಟ್ಟಾವು, ಒಳ ಜ್ವರ ಬಿಡಲಿಲ್ಲ
ಮಂಟಪದ ಜಾಜಿ ಮನೆಯವನೆ। ಸರದಾರ
ಮಂತ್ರೀಸಿ ಹೋಗೊ ತಲೆ ನೋವ ೨೭

ಹೋಳಿಗತ್ತು:— ಹೆಬ್ಬೊಬ್ಬಿ ಮರೆಯಾಗ, ಬಗ್ಗಿ ನೋಡುವಳ್ಯಾರ
ಕಬ್ಬಕ್ಕಿಯಂತ ಮಲೆಯುವಳ। ನಾ ಕಂಡು
ಗೊಬ್ಬರ್ಹಾಕುದಕ ಮನಸಿಲ್ಲ ೨೮

ಅಷ್ಟ ಗುಡ್ಡವ ದಾಟಿ, ಕಷ್ಟ ಕಣಿವಿಯ ದಾಟಿ
ಬಿಮ್ಮೋಡಿ ಬಂದೆ ನಿನಗಾಗಿ । ಎಲೆ ಹುಡಗಿ
ಎದ್ದು ದನಿದೋರ ನನಗಾಗಿ ೨೯

ಹೋಳಿ ದುಂದುಮೆ:— ದುಂದುಮೆ ಕೇಳ್ರಿ ದುಂದುಮೆ ॥ ಪ
ಕಬ್ಬು ಕಾರುಳ್ಳವನ, ಹುಬ್ಬು ನೇರುಳ್ಳವನ
ಗೊಬ್ಬರದ ಗಾಡಿ ಹೊಡೆಯೂವ ದುಂ

ಗೊಬ್ಬರದ ಗಾಡಿ ಹೊಡೆಯೂವ ಗೆಣೆಯಾನ
ಹುಬ್ಬಿಗಿನ್ನೊಂದು ಸರಿವುಂಟೆ ದುಂ ೩೦

ಕ್ವಾರಿ ಮೀಶೆಯ ತಿದ್ದಿ, ನೀರಿಗೋಗ್ತುವಾಗ
ದಾರ್ಯಾಗ ಕಂಡೆ ಚೆಲುವನ್ನ ದುಂ
ದಾರ್ಯಾಗ ಕಂಡೆ ಚೆಲುವನ್ನ ಮನಸಾಗಿ
ವಾರ್ಯಾಗ ತರುಬಿ ಕೇಳೀನ ದುಂ ೩೧

ಹೋಳಿ ಮಲ್ಲಿಗೆ:—ಮಲ್ಲೀಗೆ ದುಂಡ ಮಲ್ಲಿಗೆ ॥ ಪ ॥
ಮಾವನ ಎಲಿ ಮಗಳೆ, ಕೋಗಿಲ ದನಿಯವಳೆ
ತಾವರೆ ಮೊಗ್ಗಿ ಮೊಲೆಯವಳೆ ಮ

ತಾವರೆ ಮೊಗ್ಗಿ ಮೊಲೆಯವಳೆ ಅರಗಿಳಿಯೆ
ಬಾಯಾರಿ ಬಂದೆ ನೀರ್ಕೊಡ ಮ ೩೨

ನೀರಿಗ್ಹೋಗುವ ಹೆಣ್ಣು, ನಿಲ್ಲ ನಾ ಬರತೀನ
ನಿನ್ನಾಣೆ ನಿನ್ನ ಕೊಡದಾಣೆ ಮ

ನಿನ್ನಾಣೆ ನಿನ್ನ ಕೊಡದಾಣೆ ಕೊರಳನ್ನ
ಸರದಾಣೆ ನೀರ ಹೊಳೆಯಾಣೆ ಮ ೩೩

ಹೋಳಿ ಪರಿಕೆ:—ಕುಂತಲ್ಲೆ ಹೋದಲ್ಲೆ, ನಿಂತಲ್ಲೆ ಬಂದಲ್ಲೆ
ಹಂತ್ಯಾಕ ಬ್ಯಾಡೊ ನನಗೆಣೆಯ । ಜನ ಹರಲಿ
ಚಿಂತಿ ನಿನಗೇಟು ಇಲ್ಲೇನೊ ೩೪

ಕರಿಯ ಕಂಬಳಿ ಬ್ಯಾಡೊ,
ಬಿಳಿಯ ಹಚ್ಚಡ ಬ್ಯಾಡೊ
ಬೆಳದಿಂಗಳಕ ಬರಬ್ಯಾಡೊ । ನನ ಗೆಣೆಯ
ಸಿಕ್ಕರ ಚೆರಗ ಸಿಡದೀತೊ ೩೫

ಹೋಳಿ ಗತ್ತು:— ಹರಲಿ ಪಂಪರು ಬರಲಿ, ಹರಿದಿರಲಿ ಗೆಣತಾನ
ಮರಿಬ್ಯಾಡ ನನ್ನ ಎಲೆ ಗೆಣತಿ । ನಿನಗಾಗಿ
ಎರಗಿ ಬಂದೇನ ಮನಿತನಕ ೩೬

ಕುಂದ್ಯಾಸಿ ಸುಡಿದ್ಯಾರೆ, ನಿನಗೇನ ಎಲೆ ಹೆಣ್ಣು
ನಾನಿದ್ದಮ್ಯಾಲಿ ಭಯವೇನ । ನನ ಗೆಣತಿ
ನೂರು ಬಿದ್ದಾರು ಗೆಲುವೇನ ೩೭

ಹೋಳಿ ಪರಿಕೆ:— ಹಾಡು ಹಾಡಂದ್ಯಾರೆ, ನಾನೇನು ಹಾಡ್ಯಾಲಿ
ಹಾಡೊ ನನ ಗೆಣೆಯ ನನಮ್ಯಾಲೆ । ಮೂಡಣ
ಜಾಣ ಕೂರ್‍ಯಾಗೆ ಹೊಡೆದ್ಹಾಂಗ ೩೮

ನೀರಾಗ ನಿಂತಿರುವ, ನೀಲಿ ಪಾವುಡದಣ್ಣ
ನೀರ ಕೆಟ್ಟಾವೊ ಬದಿಗಾಗೊ । ಗಂಡುಳ್ಳ
ಬಾಲಿ ಕೆಟ್ಟಾಳೊ ನಿನಗಾಗಿ ೩೯

ಹೋಳಿಗತ್ತು:— ಗೆಣತಿ ಗೆಣೆಯನ ಜಾತ್ರಿ, ಕೆಲವ್ಯಾಡಿ ರಂಗನದ
ಎಲ್ಲವ್ನ ಜಾತ್ರಿ ಜೋಗ್ತೇರ್‍ದ । ಕೂಡಲ
ಸಂಗಯ್ನ ಜಾತ್ರಿ ಶರಣರದ ೪೦

ಜಾತ್ರ್ಯಾಗೆ ಹೋಗ್ತೀನಿ, ಜವನಾವ ತರ್‍ತೀನಿ
ಹೂವ ತರ್‍ತೀನಿ ತುರುಬ್ಯಾಗೆ । ಎಲೆ ಹುಡಗಿ
ಬಂದಿ ತರ್‍ತೀನಿ ಬಲಗೈಗೆ ೪೧

ಹೋಳಿ ಏರಿಕೆ:—ಜಾತ್ರಿಗ್ಹೋಗ್ತಿನಂತ, ರಾತ್ರ್ಯಾಗ ಎದ್ದಾಳ
ದೋತ್ರದ ತುಂಬ ಕರಿಗಡಬ। ಕಟಿಗೊಂಡು
ಜಾತ್ರ್ಯಾಗ್ಹುಡಿಕ್ಯಾಳ ಗೆಣೆಯನ್ನ ೪೨

ಹುಡಗೀಯ ಕರಕೊಂಡು, ಹುಡುಗ
ಜಾತ್ರಿಗ್ಹೋದ
ಹುರುಗಡಲಿ ಬೆಲ್ಲ ಉಡಿಯಾಗ। ಕಟಿಗೊಂಡು
ಹುಡಗ್ಯಾಯ ಕೈಗೆ ಬಳೆಯಿಟ್ಟ ೪೩

ಹೋಳಿಗತ್ತು:— ಈಟೇಟ ಮೊಲೆಯವಳ, ಚೀಟಿ ಕುಪ್ಪಸದವಳ
ಬ್ಯಾಟಿ ಹೋಗತೀನಿ ಕೈಬಿಡ। ಮಲ್ಲಾಡ
ಜೇನ ತರತ್ಯಾನಿ ಸವಿನೋಡ ೪೪

ಗುತ್ತಿಗೆ ಮಲನಾಡ, ಎತ್ತು ಮಾರಲು ಹೋದೆ
ಒತ್ತ್ಯಾಯ ಬಿದ್ದ ತಡವಾಯ್ತು। ನನ ಗೆಣತಿ
ಚಿತ್ತ ನಿನಮ್ಯಾಲೆ ನೆಡುಬ್ಯಾಡ ೪೫

ಹೋಳಿ ಏರಿಕೆ:—ಗೆಣಸಿನ್ಹೋಳಿಗಿ ಮಾಡಿ, ಎಣಿಸಿ ಗಂಗಳಕ್ಹಾಕಿ
ನೆನಸಿದ ಗೆಣೆಯ ಬರಲಿಲ್ಲ। ಆ ಹುಡಗಿ
ಮನಸಿನಾಗ ಮರಗಿ ಅಳತಾಳೊ ೪೬

ಮುಗಿಲಮ್ಯಾಗಿನ ಚಿಕ್ಕಿ, ಹಗಲಮೂಡಿದರೇನ
ಅಗಲಿ ಇರುವವನ ಗೊಡವೇನ। ಮಾಣ್ಯಾಕ
ಹಾವಿನ ಬದಿಲಿದ್ದು ಫಲವೇನು ೪೭

ಹೋಳಿಗತ್ತು:— ಈ ವರುಷ ಬಂದೀನೆ, ಮೀಸಿಯ ತಿದ್ದ್ಯಾನೆ
ವಾಸ್ಯಾಡಬ್ಯಾಡ ನನಗೂಡ। ಎಲೆ ಹುಡಗಿ
ಬೇಸ್ಯ್ಹಾಂಗ ಬೆಳಗು ಕಳಿಯೋಣ ೪೮

ಅಟೀಟ್ಕ ನೆಟಗೊಂಡು, ಪಾರಿಕಟಿಗೊಳ್ಳು ಹೆಣ್ಣ
ಸಿಟ್ಟ್ನಿ ನೆಡುಬ್ಯಾಡ ನನವ್ಯಾಲ। ನನ ಗೆಣತಿ
ನಕ್ಕಾಡಿ ಬೆಳಗುಗಳಿಯೋಣ ೪೯

ಹೋಳಿ ಮಲ್ಲಿಗೆ:—ಮಲ್ಲೀಗೆ ದುಂಡ ಮಲ್ಲಿಗೆ ॥ ಪ ॥
ಗೆಣೆಯನ್ನ ಕಳಕೊಂಡ, ಒಣಮಾಂ
ಮಾಡಿಕೊಂಡ
ಮಣಮಣಿಸಿ ಊರ ತಿರುಗ್ಯಾಳೊ ಮ

ಮಣಮಣಿಸಿ ಊರ ತಿರುಗ್ಯಾಳ ಅಗಸ್ಯಾಗ
ಹಣಿ ಹಣಿ ಬಡಕೊಂಡು ಅಳತಾಳ ಮ ೫೦

ಗೆಣೆಯ ಬಿಟ್ಟರು ಕೂಡ, ಗೆಣೆಯನಾಡೀದಾಟ
ಮನದಾಗ ಊರಿ ನಿಂತಾವೊ ಮ

ಮನದಾಗ ಊರಿ ನಿಂತಾವ ಆ ಹುಡಗಿ
ಚೆಣಚೆಣಕ ನೆನಸಿ ಅಳತಾಳ ಮ ೫೧

ಹೋಳಿಗತ್ತು:— ಕಟ್ಟಿರಿವಿ ಕಂದ್ಹಾಕಿ, ಎಂಟು ಮಗಿ ಹಾಲ್ಹಿಂಡಿ
ನೆಂಟರು ಉಂಡು ನೆಲವುಂಡೊ। ಈಗಿನ
ಕುಂಟ್ಲೇರು ಉಂಡು ಕುಡಿಕುಂಡೊ ೫೨

ಬೇಲಿ ಮ್ಯಾಗಿನ ಹೂವ, ಬೆಳ್ಳಗಿದ್ದಽರೇನ
ಮಲ್ಲಿಗಿಯಂತ ಗಂಡನ। ಬಿಟಕೊಟ್ಟು
ಹುಲ್ಲು ಕೊಯ್ಯುವನ ಹುಡುಕ್ಯಾಳ ೫೩

ಹೋಳಿ ಏರಿಕೆ:—ಸೂಳೀಗೆ ಹೋದಾವ್ಸ;ಏನಾದ ಎಂತಾದ
ಕಾಡನಾಯಾದ ಕಪಿಯಾದ। ಮರುದಿನಕ
ಸೂಳಿ ಕಾಲ್ಹಽಗೆ ಕೆರುವಾದ ೫೪

ಹುಡಗೀಯ ಕೂಡಾಡಿ, ಹುಡುಗ್ಯಾಕ ಒಡವಾದ
ಬಂಗಾರ ಒತ್ತಿ ಬಳಿ ಒತ್ತಿ । ಆದಾವ
ಸಣ್ಣ ಸೀರೊತ್ತಿ ಸವೆದ್ಹೋದ ೫೫

ಹೋಳಿ ಮಲ್ಲಿಗೆ:—ಮಲ್ಲೀಗೆ ದುಂಡ ಮಲ್ಲಿಗೆ ॥ ಪ
ಸಂಜಿ ಅಕ್ಕಿ ಕುಟ್ಟಿ, ಕೆರೆಯ ನೀರಿಗೆ ಹೋಗಿ
ವಜ್ಜರುಂಗರದ ಚೆಲುವನ ಮ

ವಜ್ಜರುಂಗರದ ಚೆಲುವನ ಕೂಡಾಡಿ
ಗುದ್ದಾಡಿ ಬಳಿಯ ಒಡಕೊಂಡೆ ಮ ೫೬

ಸೂಳಿಗೆ ಹೋಗವನ, ಸುಲಿದು ಮಟ್ಟಿ ಕಟ್ಟಿ
ಊರ ಹೊರಗವನ ಹೆಡಮುರಗಿ ಮ

ಊರ ಹೊರಗವನ ಹೆಡಮುರಗಿ ಕಟ್ಟಿದರ
ಸೂಳೆಂಬು ಸಬುದ ಬಿಡಲಿಲ್ಲ ಮ ೫೭

ಹೋಳಿ ಗತ್ತು:—ಹಾರೂರ ಹುಡಗಿಗೆ, ಹಾರಾಟ ಬೇಕಾಗಿ
ಜೀರ ಹುಡುಗನಿಗೆ ಕೂಡ್ಯಾಳೊ । ಮಲ್ಲಿಗಿ
ಸೂರಿ ಮುತ್ತಿಟ್ಟ ಬೆಳತನಕೊ ೫೮

ಮಂಗ ಮುಸಲರ ಹುಡಗಿ, ಚೊಂಗೇವ
ಮಾಡ್ಯಾಳ
ಜಂಗಮರ ಹುಡುಗ ತಿನವೊಲ್ಲ । ಆ ಹುಡುಗಿ
ಜಂಗ ಕಟಿಗೊಂಡು ಕುಣಿದಾಳೊ ೫೯

ಹೋಳಿ ಏರಿಕೆ:—ಹಾಡಿಗೆ ಹಾಡಿಲ್ಲ, ಏಡಿಗೆ ತಲೆಯಿಲ್ಲ
ಮೋಡ ಬಂದಲ್ಲಿ ಬಿಸಲಿಲ್ಲ । ಹೆಣ್ಣಿಗೆ
ಓಡಿ ಹೋದಲ್ಲಿ ಸುಖವಿಲ್ಲ ೬೦

ಗಂಡನ ಹಿತವೇನ, ಕೆಂಡದ ತಂಪೇನ
ಕೊಂಡ ಮಜ್ಜಿಗೆ ರುಚಿ ಏನ ಎಲೆ ಗೆಣೆಯು
ಭಂಡಾಗಿ ಬದುಕಿ ಫಲವೇನ ೬೧

ಹೋಳಿ ಗತ್ತು:—ಗಂಡು ಹೊಡಿಯಲಿ ಭೂಮಿ, ಹೆಣ್ಣು ಹೂಡಲಿ ಒಲಿಯು
ಬಣ್ಣ ತೊಟ್ಟಿಲ ತೂಗ್ಯಲಿ। ಶಿವರಾಯ
ಗಿಣ್ಣ ನಿನಗೆಡೆಯೊ ಕೈಮುಗಿದು ೬೨

ಹೋಳಿಯಾಡದ ನಾಡು, ನಾಳಿನದೆ ಕಾಡಾತೊ
ಗೋಳಾತೊ ಜನಕ ಮೂಲಾತೊ। ಮಳೆಹೋಗಿ
ಹಾಳಾತೊ ಪಿಡಗೆದ್ದು ದಿನದಿನಕೊ ೬೩

# ದುಂದುಮೆ ಹಾಡುಗಳು

## ಮುಚ್ಚಖಂಡಿಯ ದುಂದುಮೆ

ದುಂದುಮೆ ಕೇಳ್ರಿ ದುಂದುಮೆ ॥ ಪ ॥

ದುಂದುಮೆ ಎಂತೆಂದು ಪಾಡಿರಿ ಜನರು
ದುಂದುಮೆ ಬಸವಂತನ ಹಬ್ಬ। ದುಂದುಮೆ
ದುಂದು ನಿರ್ದಾಮೆ ಸಾಲಗನ್ನಿರೆ
ದುಂದುಮೆ ಕೇಳ್ರಿ ದುಂದುಮೆ ॥ ಅ. ಪ ॥

ಶ್ರೀಶಮೈದುನನಿಗೆ, ಪಾಶುಪತವನಿತ್ತ
ವಾಸವ ನಮಿತ ಮಹೇಶನನೆ। ಗಿರಿ
ಜೇಶನೆ ಮೂರ್ಜಗದೀಶನನೆ ಪರ-
ಮೇಶನೆ ಕೈಲಾಸ ವಾಸನನೆ। ಸುಪ್ರ ॥
ಕಾಶನೆ ಅಂಬರ ಕೇಶನೆ ಮದನವಿ
ನಾಶನೆ ಬೇಗನೆ ಪಾಲಿಸೆನ್ನ ದಯದಿ ದುಂ ೧

ಧಾತ್ರಿಯೊಳ್ಮುಚಖಂಡಿ ಕ್ಷೇತ್ರದೊಳಗಳಿವ
ಪುತ್ರನಿರುವನಾದಿ ಕ್ಷೇತ್ರದೊಳು । ಎನ್ನ-
ನೇತ್ರದಿ ನೋಡಿದೆ ಯಾತ್ರಿಯೋಳು । ಮತ್ರೆ-
ಪಾತ್ರದವರನು ಆ ಜಾತ್ರಿಯೊಳು । ಕಂಡು ॥
ರಾತ್ರಿಯೊಳ್ಕಳಿತು ಚರಿತ್ರೆ ಮಾಡಿದೆ । ಸಿಟ್ಟು
ಮಾತ್ರ ಮಾಡದೆ ವಿಚಿತ್ರ ಕೇಳುವದು ದುಂ ೨

ಪ್ಯಾಟಿಗಳೊಳಗೆಲ್ಲ, ನೀಟಾದ ಬಾಗಿಲ-
ಕೋಟೆಯ ಸಖಿಯರ ಧಾಟಬ್ಯಾರೆ । ದೇಹ
ಘಾಟವು ಎದಿಮೊಲೆ ಮಾಟ ಬ್ಯಾರೆ । ರತಿ
ಬ್ಯಾಟವು ಕಣ್ಣಿನ ನೋಟ ಬ್ಯಾರೆ । ಕಾಮ ॥
ನಾಟದೊಳಗ ಮಹಾ ಭೂಟಕರ್ರೆ । ಇವ-
ರಾಟವು ತಿಳಿಯದು ನೋಟಕ ಜನಕೆ ದುಂ ೩

ಹೆಚ್ಚಿನ ಸಖಿಯರು ಸ್ವಚ್ಛದಿ ಫಣಿಯೊಳು
ಹಚ್ಚಿಬಟ್ಟಿನ ರೇಖಾ ಚುಚ್ಚಿಹರು । ಮೇಲೆ
ಅಚ್ಚ ಕಸ್ತುರಿತಿಲಕ ಹಚ್ಚಿಹರು । ಜಾತ್ರಿ
ವೆಚ್ಚಕೆ ಪೊನ್ನಳ ಬಿಚ್ಚಿಹರು । ತಮ್ಮ ॥
ಇಚ್ಚಿಗ ಪುರುಷರ ಮೆಚ್ಚಿಲೆ ಕರಕೊಂಡು
ಮುಚ್ಚಖಂಡಿಗೆ ಬಂದಾರುತ್ಸಾಹದಿಂದ ದುಂ ೪

ಮುಟ್ಟಿದರೀಗಳೆ ಕೆಟ್ಟೀತೆಂಬುವ ಮೈಗೆ
ಪಟ್ಟಿ ಪೀತಾಂಬರ ನುಟ್ಟಿಹರು । ತೋಳ್ಗೆ
ನಟ್ಟಿಹ ಕುಪ್ಪಸ ತೊಟ್ಟಿಹರು । ಮನ-
ಕೆಷ್ಟು ಬಂದಷ್ಟೊಸ್ತ ನಿಟ್ಟಿಹರು । ಮುನ್ನ
ದೃಷ್ಟಿಲಿ ನೋಡಿನಾ ನೆಷ್ಟಂತ ವರ್ಣಿಸ
ಲೊಟ್ಟಿಗೆ ಚೆಲ್ವಿಕೆ ಘಟ್ಟಿಗಳೆನಲು ದುಂ ೫

ಕಾಲಸರ್ಪಳಿರುಳಿ ಕಾಲಂದುಗಿಯುಗೆಜ್ಜಿ
ಕಾಲುಂಗರಣುಮೆಂಟು ಪೊಲುಗಳು ಮೇಲೆ । ವಜ್ರ
ನೀಲದುಂಗರ ಮುತ್ತಿ ನೋಲೆಗಳು । ಕಂಠ
ಮಾಲೆಯು ಪದಕ ಜೋಮಾಲಿಗಳು । ಇಂಥ ॥
ಮೇಲಾಭರಣನಿಟ್ಟು ಲೋಲ್ಯಾಡುತಲಿ ಚೆಲ್ವ
ಬಾಲೆಯರು ಬರುವ ವಿಶಾಲವೇನೆಂಬೆನೊ ದುಂ ೬

ಹೆರಳು ರಾಗುಟಿ ಚೌರಿ, ಗಿಳಿಗಳೆಡಬಲಕ
ಚಳತುಂಬ್ಬಚ್ಚಿದ ಚೆಲ್ವ ಚೌಕಳಿಯು । ಮೂಗಿ
ನೊಳುನತ್ತು ಮತ್ತಿನ ಜೊಳಜೊಳಿಯು । ಕರ-
ಗಳಿಗಿಟ್ಟ ಕಡಗ ಕಂಕಣ ಬಳಿಯು । ಕೊರ ॥
ಳೊಳುಪಟ್ಟಿ ಮುತ್ತಿನೇಕಾವಳಿ ವಸ್ತ್ರ-
ಗಳನಿಟ್ಟು ನೀಲಕುಂತಳೆಯರು ಬರಲು । ದುಂ ೭

ಹರಳು ಕೆಚ್ಚಿದ ಪಟ್ಟಿ, ಸರಗಿ ಪುತ್ಥಳಿ ನೆಲ್ಲಿ
ಸರ ಚಿಂತಾಕ ಮುತ್ತಿನ್ಹಾರಗಳು । ದೋರೆ
ಹರಡಿ ಕೈಕಟ್ಟು ಕೈಹಾರಗಳು । ವಂಕಿ
ಮುರಡಿ ಸರ್ಪಳಿ ತೊಳ್ಬಾಪೂರಿಗಳು । ಮೀನ ॥
ಹಿರಿಪಿಲ್ಲಿ ಕಿರಿಪಿಲ್ಲಿ ಸುರಳಿ ಸಹಿತವಾಗಿ
ಪರಿಪರಿ ವಸ್ತ್ರವ ಧರಿಸಿಕೊಂಡಿಹರು ದುಂ ೮

ಜಾಣೇರು ಸುಗುಣ ನಿಶ್ರೇಣೇರು ಕಳಾಹಿ
ವೇಣೇರು ಪಲ್ಲವ ಪಾಣಿಯರು । ಮೃದು
ವಾಣೇರು ಮಾನ ಪ್ರಮಾಣಿಯರು । ಕರ
ತ್ರಾಣೇರು ಘನ ಧುರೀಣಿಯರು । ಸುಪ್ರ
ವೇಣೇರು ಮನ್ಮಥನಾಣೇರು ಇನ್ನ ಈ
ಕ್ಷೋಣಿಯೊಳಿಲ್ಲಿ ನಾ ಕಾಣೆ ನಿಂಥವರ ದುಂ ೯

ಕಂಬಕಂಧರ ಮರಿ ದುಂಬಿ ಕಂಗುರಳಿಯರು
ಬಿಂಬಾಧರದ ಸೊನಿತುಂಬಿಯರು ಬಣ್ಣ
ಲಿಂಬಿಯಹಣ್ಣಿರಕದ ಬೊಂಬಿಯರು । ಸ್ವರ್ಣ
ಕುಂಬ ಕುಚದ ಮಹಾರಂಬಿಯರು । ಸರ್ವ ॥
ಸಂಭ್ರಮ ದಿನದಲ್ಲಿ ಕುಂಭಿನಿಯೊಳು ಪೊಸ
ತೆಂಬಂತೆ ತೋರಿದರಂಬುಜಾಕ್ಷಿಯರು ದುಂ ೧೦

ಬಿದರಿದೆರಳಿನೋಟ, ಕದಪು ಕನ್ನಡಿ ನಡಿ-
ಮದಗಜ ಬಟುತರ ವದನೀಯರು । ಕೆಂಪ
ದಧರಮಲ್ಲಿಗಿ ಮಗ್ಗಿರದನೀಯರು । ಚೆಲ್ವ
ಮದನನ ಕದನಕ್ಕೆ ನದನೀಯರು । ಮಾಡು ।
ಹದರೀಗ ನೋಡುವ ನದರೀಗೆ ಇನ್ನೊಬ್ಬ
ರಿದರಿಲ್ಲವೆಂಬುವ ಚದರಿಯರಿರಲು ದುಂ ೧೧

ಪುಂಡತನದಿ ಸೊಕ್ಕಿಕೊಂಡಿರ್ದ ಹರಿಯುದ
ಮಿಂಡಿಯರ್ಕುಚಲೊಪ್ಪ ಚಂಡುಗಳು । ಒಳ್ಳೆ
ದುಂಡ ಕಟದ ಗೋಲಿಗುಂಡಗಳು । ಮುತ್ತಿ-
ನುಂಡಿಯು ಕನಕದ ಗಿಂಡಿಗಳು । ಇಂಥ ॥
ಮಿಂಡೆದ್ದ ಮೊಲೆಗಳ ಕಂಡು ವಿಟರು ಮರುಳು
ಗೊಂಡು ಬೆನ್ಹತ್ತುವ ಭಂಡ ನಾನೆಂಬೆ ದುಂ ೧೨

ನೀಟ್ಕುಚಗಳಿಗೊಳ್ಳೆ ದಿಟ್ಕಾಂಬುಮಾಂಜರ
ಪಾಟ್ಕುಪ್ಪಸವ ತೊಟ್ಟು ಥಾಟ್ಕಾಂಬುವರು । ರತಿ
ಬ್ಯಾಟ್ಕಿಂತ ಇವರೊಳ್ಳೆ ಘಾಟ್ಕಾಂಬುವರು । ಕಾಮ-
ನಾಟ್ಕಂತು ನೋಡಲು ಝಾಟ್ಕಾಂಬುವರು । ತಮ್ಮ ॥
ಕೂಟ್ಕಸೋತವರ ಮೇಲೆ ಕಾಟ್ಕೈಯನಡಿಸುವರು
ಕಾಟ್ಕನುಳ್ಳಂತ ನಾಟ್ಕ ಸಖಿಯರು ದುಂ ೧೩

ಹಾಡೂವರೆಲ್ಲರು ತಲೆಗೂಡುವರು ಸರಸಗ-
ಳಾಡುವರು ತಿರವನಲ್ಲಾಡುವರಯ್ಯ । ಮುಂದಿ
ನೋಡುವರು ಹಾಸ್ಯ ಮಾಡುವರಯ್ಯ । ಬಡಿ-
ದಾಡುವರು ಕೈಹೊಡಿದೋಡುವರಯ್ಯ । ಸುಳಿ ॥
ದಾಡುವರು ಸವಿಮಾತನಾಡವರು ಖರ್ಚಿಗೆ
ಬೇಡುವರು ವಿಟಗಾರನ ಕಾಡುವರು ಬಿಡದೆ ದುಂ ೧೪

ಚೊಕ್ಕಟವಾದಂತ ಬೆಂಡು ಬೆನಕ ಬರ್ಫಿ
ತುಕ್ಕಡಿ ಕಲ್ಯಾಣಿ ಶಾವಿಗಳು ॥ ಮನ-
ಕಕ್ಕರ ತೋರುವ ಬುಂದೆಗಳು । ಕರ-
ದಿಕ್ಕಿದ ಜಿಲ್ಬಿಲಿ ಲಡ್ಡುಗಳು । ಚಿನ್ನಿ ॥
ಸಕ್ಕರಿ ಬದುಕನ್ನು ಸೊಕ್ಕಜವ್ವನಿಯರು
ರೊಕ್ಕಗಳನು ಕೊಟ್ಟು ತಕ್ಕೊಂಬುತಿಹರು ದುಂ ೧೫

ಚೂರ್ಮರಿ ಬುಂದೇವು, ಪೇರ್ಮೋದಲಾಗಿ ವಿ-
ಚಾರ್ಮಾಡಿ ತರಿಸಿ ತಯಾರಾಡುತ । ವಿಟ-
ಗಾರ್ಮಂದಿ ಕೂಡ ಫಲಾರ್ಮಾಡುತ । ಬಹು
ಪೇರ್ಮಾಡಿ ತಿನಿಸು ತಯಾರ್ಮಾಡುತ । ಮಹಾ ॥
ಕೂರ್ಮಿ ಇಂತು ಸವುಪ ಕಾರ್ಕ್ಮಾಡಿ ಹೊನ್ನಿನ
ಕಾರ್ಮಳಿ ಸುರಿಸುವ ವಾರ್ಮಡದಿಯರು ದುಂ ೧೬

ಜಾತ್ಕಾಣಿ ನತ್ಕಣಿ ಸೂತ್ಕಣ್ಗಳ ತಿರ
ವೂತ್ಕಯ್ಯಾ ನೊನ್ನಿ ಮಾಡು ಬೇತ್ಕಾರರು । ಅತಿ
ಪ್ರೀತ್ಕಾಣಿಸುವ ಸವಿಮಾತ್ಕಾರರು । ಬರ-
ವೂತ್ಕಲಿತ್ಹಾಡು ಸಂಗೀತ್ಗಾರರು । ತಾನೆ ॥
ಸೋತ್ಕರದಂಗ ಮಾಡಿ ಘಾತ್ಕದಿ ಸುಲಕೊಂಬು
ಯಾತ್ಕೇನು ಕಡಿಮಿಲ್ಲ ಜಾತ್ಕ ಸಖಿಯರು ದುಂ ೧೭

ತರುಳ್ಮಣಿಯರು ಮಂದಿ, ಮರುಳ್ಮಾಡು ನೆವದಿಂದ
ಎರಳಿಮರಿ ನೋಟಾದಿ ಹೊರಳಿ ನೋಡಲು। ತುದಿ
ಬೆರಳು ಮೊನೆಯಿಂದೆ ಮುಂಗುರಳು ನೀಡಲು। ಚೆಲ್ವ
ಕೊರಳು ಮಧ್ಯದ್ವಾರವ ಸರಳ ಮಾಡಿಡಲು। ಕಂಡು ॥
ದುರುಳ ಮಾರ ಹೊಡುವಂಥ ಸುರಮೊನಿ ಬೆನ್ನಿಗೆ
ನೆರಳ ಮನದೊಳು ಹಗಲಿರುಳು ಮರಿಯಾದೆ ದುಂ ೧೮

ರೇಸ್ಮಿಯಿಂದ್ಮಾಡುವ ಹಾಸ್ಮಲಗು ಸಾಮಾನ
ದಾಸ್ಮಡದಿಯರಿಂದ ಖಾಸ್ಮಾಡಿಸಿ। ತಂದು
ಹಾಸ್ಮಂಚದೊಳು ಹಾಕ್ಸಿ ಬೇಸ್ಮಾಡಿಸಿ। ಒಳ್ಳೆ
ಬಾಸ ಮಲ್ಲಿಗೆಯ ನೂಸ್ಮಾಡಿಸಿ। ವಿಟರ್
ವಿಸ್ಮಂದಿ ಬಂದರ ನಾಟಕ ವಿಲಾಸದಿ
ಮೋಸ್ಮಾಡಿ ತೋರಿಸು ವಿಲಾಸ್ಮಡದಿಯರು ದುಂ ೧೯

ಎಲ್ಲ ಕ್ಷೇತ್ರಗಳೊಳು ಬಲ್ಲಿದ ಮುಚಖಿಂಡಿ
ಅಲ್ಲೆ ಕಾಮಿನಿಯರ ಥಾಟವನು। ತಮ್ಮ
ನಲ್ಲನ ಕರಿಸುವ ಬ್ಯಾಟವನು। ಅವ-
ರಲ್ಲಿ ಮಾಡಿದ ಮೋಹದಾಟವನು। ಹೇಮ ॥
ಗಲ್ಲೋಳು ಗುರುವಂಜನೊಲ್ಮಿಯಿಂದಿರುವಂಥ
ಅಲ್ಲಮ ಕಂಡಿದನೆಲ್ಲ ಪೇಳಿದನು ದುಂ ೨೦

# 'ಹುಬ್ಬಳ್ಳಿ ಮಂಗ್ಯಾ'ನ ದುಂದುಮೆ

ದುಂದುಮೆ ಕೇಳ್ರಿ ದುಂದುಮೆ ॥ ಪ ॥
ದುಂದುಮೆ ಎಂತೆಂದು ಪಾಡಿರಿ ಜನರು
ದುಂದುಮೆ ಬಸವಂತನ ಹಬ್ಬ । ದುಂದುಮೆ ।
ದುಂದುಮೆ ನಿರ್ದುಮೆ ನಾಲಗನ್ನಿರೆ ।
ದುಂದುಮೆ ಕೇಳ್ರಿ ದುಂದುಮೆ ॥ ಅ. ಪ ॥

ಸಬ್ಬ ದೇಶದೊಳು ಇಂಥ ಹೆಚ್ಚಿನ ಮರ್ಕಟ
ಅಬ್ಬರಿಸುತ್ತ ಹಾರ್‍ಯಾಡುವವು । ತಮ್ಮ
ಹುಬ್ಬು ಹಾರಿಸಿ ಹಲ್ಲು ಕಿಸಿಯುವವು । ಮತ್ತ
ತಬ್ಬುಬ್ಬಿ ಎಲೆಯಲ್ಲಿ ಕೂಡುವವು । ಮೈಯು ॥
ಉಬ್ಬುತ ಕೊಬ್ಬುತ ಹಬ್ಬುತ ಒಳಗೆಲ್ಲ
ಹುಬ್ಬಳ್ಳಿಯೊಳು ಮಂಗ ಹುಡದಿಯಾಡಿದವು ॥ ದುಂ ೧

ಅಂಗನೆಯರು ತಮ್ಮ ಅಂಗಳದೊಳು ಮನಿ
ಮುಂಗಡಿಯೊಳಗೆಲ್ಲ ಕೂಡಿದವು । ಮತ್ತೆ
ಹಿಂಗದೆ ಒಳಪೊಕ್ಕು ನೋಡಿದವು । ದೊಡ್ಡ
ಸಂಗಟಿಸ್ವಾರಿ ಈಡಾಡಿದವು । ಇಟ್ಟ ॥
ಗಂಗಳ ತಂಬಿಗಿ ಆಂಬ್ರ ಚೆಲ್ಲಿದವವ್ವಾ
ಮಂಗಳವಾರ ಪ್ಯಾಟಿ ಮಾನಗೇಡಿ ಮಂಗ ॥ ದುಂ ೨

ದೊಡ್ಡ ಮುಂಡಾಸ ಗಿಡ್ಡಂಗಿ ಜನಿವಾರ
ದೊಡ್ಡ ಗೊಂಗಡಿಯನ್ನು ಹಾಸಿಯರು । ಸಣ್ಣ
ಗಡ್ಡ ಹತ್ತಿ ಮೀಸಿ ಚಿನಿವಾಲರು । ಮುಂದೆ
ಅಡ್ಡ ಹಾಯ್ದರೆ ನೋಡಿ ಕರೆಯುವರು । ಹೊನ್ನು ॥
ದುಡ್ಡು ರೂಪಾಯಿ ಚೀಲ ಅಡ್ಡಡ್ಡ ಎಳಿದಾಡಿ
ಎಡ್ಡು ಹಚ್ಚಿತಲ್ಲೊ ಅಡಮುಟ್ಟ ಮಂಗ ದುಂ ೩

ಹಪ್ಪಳ ಸಾಂಡಿಗಿ ಸೆಂಡಿಗಿ ಗುಳಗಿಯ
ಚಪ್ಪರ ಮುಂದೊಣ ಹಾಕಿಹಳು । ಒಂದು
ತುಪ್ಪದ ಚಟಿಕೀಯ ಮುಂದಿಟ್ಟಿಹಳು । ಕೈಯ
ಚಪ್ಪಳಿಕ್ಕುತ ಮಾತನಾಡುವಳು । ನೋಡಿ ॥
ತಪ್ಪದೆ ಹೊಕ್ಕೆಲ್ಲೊ ತಿಂದು ತಕ್ಕಿಯ ಬಿದ್ದು
ಕುಪ್ಪನ ಹರಿದಿತು ಕುಲಗೇಡಿ ಮಂಗ ದುಂ ೪

ಪಂಚಮಿ ಬಂತೆಂದು, ಹಂಚಿ ಬಿಟ್ಟಿಳ್ಳನು
ಹಂಚಿಕೆಯಿಂದ್ಹುರಿದಿಟ್ಟಿದ್ದೆನೆ । ಆಗ
ಮುಂಚೆ ಎಳ್ಳಚಿಗಳಿ ತಂಬಿಟು ಕಟ್ಟಿದ್ದೆನೆ । ಹೊಸ
ಕುಂಚಿಗಿ ಟೊಪ್ಪಿಗಿ ಹೊಲಿಸಿಟ್ಟಿದ್ದೆನೆ । ಮನಿಯ
ಹಂಚು ಒಡೆದೊಳಗ್ಹೊಕ್ಕೆಲ್ಲ ತಿಂದಿತು
ಕಂಚಕಾರೋಣಿ ಕಸವಂಟ ಮಂಗ ದುಂ ೫

ಅಚ್ಚಬಾಳಿಯ ಹಣ್ಣು ಒಟ್ಟಿಟ್ಟು, ಗಲ್ಲಕೆ
ಹಚ್ಚಿತು ಕೈಯನು ಮುಂಬಿನಲಿ । ಅದು
ತಬ್ಬಿಕೊಂಡೋಡಿತು ಕುಂಬಿಯಲಿ । ಕೂತು
ಬಿಚ್ಚಿತೆಽ ತೋವಿಯ ಕೈಯಿಂದಲಿ । ಬಾಯ್ಗ ॥
ಹಚ್ಚಿತೆನ್ನಯ ಜೀವ ಕಿಚ್ಚೆದ್ದು ಹೊಯ್ಕೊಂಡೆ
ಹೆಚ್ಚೆಂದು ಕಾಣವ್ವ ಹಿರಿಪ್ಯಾಟಿ ಮಂಗ ದುಂ ೬

ನಲ್ಲಿರ ಕೈಯಾನ ರಾಟಿಯ ಒಳಗಿನ
ಚಿಲ್ಲನು ಕಿತ್ತು ಈಡಾಡಿತಲ್ಲ । ಬುಟ್ಟಿ
ಯಲ್ಲಿದ್ದ ಕುಕ್ಕಡಿ ಹರದೀತಲ್ಲ । ಹಾಸುಗ್ಹಾರಿ
ಹಲ್ಲಿಂದ ಹರಿದೋಡಿತಲ್ಲ । ಮತ್ತು ॥
ಹಚ್ಚಿಟ್ಟ ಹಣ್ಣುಕಾಯಿ ನೀರಲ ಪೇರಲ
ಪಲ್ಲೇವ ತಿಂದಿತು ಪಡನೆಂಟ ಮಂಗ ದುಂ ೭

ಬುಟ್ಟೇದ ಕುಪ್ಪಸ ಬುಗುಡಿ ಅಂಚಿನ ಸೀರಿ
ಉಟ್ಟು ತೊಟಗೊಂಡಿರುತಿದ್ದೆನೆ । ಅಕ್ಕಿ
ಕುಟ್ಟಿಕೊಂತ ಸಾ ಕುಂತಿದ್ದೆನೆ । ಒಂದು
ಕಟ್ಟಿಗಿ ಕೋಲನ್ನು ಇಟ್ಟಿದ್ದೆನೆ । ಬಂದು ॥
ಬಟ್ಟ ಕುಚವ ಮುಟ್ಟಿ ಕಟ್ಟನೆ ಕಡದೀತು
ಕಟ್ಟಾಣಿ ಹರದೀತು ಕವಡಿಯು ಮಂಗ ದುಂ ೮

ಬುಕ್ಕಿಟ್ಟಿನ ಚೀಲ ಬುಡಮೇಲ ಮಾಡಿತು
ಚಿಕ್ಕ ತಕ್ಕಂಗಡಿ ಹೊಕ್ಕಿತಲ್ಲ । ಕಲ್ಲ-
ನಕ್ಕರೆ ಚೀಲವ ನೆಕ್ಕಿತಲ್ಲ । ಮತ್ತೆ
ತಕ್ಕಡಿ ದಂಡಿಗಿ ಮುರದಿತಲ್ಲ । ಅವ- ॥
ಲಕ್ಕಿ ರೇವಡಿ ಬೆಂಡು ಬೆತ್ತಸ ಪುಟಾಣಿ
ಮಕ್ಕಳ ಕಸಕೊಂಡು ಮುಕ್ಕಿತು ಮಂಗ ದು ೯

ಪೆಟ್ಟಿಗಿಯೊಳಗಿನ ಪಟ್ಟೆದಂಚಿನ ಸೀರಿ
ಇಟ್ಟು ಬಚ್ಚಲದಾಗ ಕುಂತಿದ್ದೆನೆ । ಎನ್ನ
ಕಟ್ಟಿದ ಕೂದಲ ಬಿಚ್ಚಿದ್ದೆನೆ । ಮತ್ತೆ
ಬಟ್ಟೆ ಬತ್ತಲೆ ನಾನು ಕೂತಿದ್ದೆನೆ । ಆಗ ॥
ತಟ್ಟಿ ಮುರಿದು ಬಂದು ಇಟ್ಟಸೀರಿಯು ಕೊಂಡ
ಕಟ್ಟು ಕುಲಾಯುವ ಕಸಿಕೊಂತು ಮಂಗ ದುಂ ೧೦

ಬಗ್ಗನೆ ಹೊಕ್ಕಿತು ಮಗ್ಗದವರ ಮನಿಯು
ಹುಗ್ಗಿಯ ಗಡಿಗಿಗೆ ಹಾರಿತಲ್ಲ । ಅದು
ಬಗ್ಗಿಸಿ ಬಾರಲ್ಹಾಕಿತಲ್ಲ । ಬಲು
ಸುಗ್ಗಿಯಾಯಿತೆಂದು ಹಿಗ್ಗಿತಲ್ಲ । ಕುಂತು ॥
ಬಗ್ಗಿದವರ ಮೇಲೆ ಹಗ್ಗ ಹರಿದಿಳಿದು
ನುಗ್ಗ ಮಾಡಿತವ್ವ ಅಗ್ಗದ ಮಂಗ ದುಂ ೧೧

'ಹುಬ್ಬಳ್ಳಿ ಮಂಗ್ಯಾ'ನ ಮುಂಡುಮೆ

ಹಾರಿತು ಜವಳಿಯು ಅಂಗಡಿ ನಾಲಿಗೆ
ಬಾರಲ್ಹಾಕಿತು ಮುಸಿಡೌತಿಯನು । ಕಿತ್ತು
ಈಡಾಡಿತೆಲ್ಲ ಜವಳಿಯನು । ಮಣಿ
ಗಾರಂಗಡಿಗಿಟ್ವಿ ದಾಳಿಯನು । ವಟ್ಟೆ ॥
ಮಾರುನಾರೇರ ಮಾರಿಯು ಮೇಲ್ಹೊಡೆದು
ನೀರಿಯ ಕಳೆದಿತು ಸಿರಿಗೇಡಿ ಮಂಗ ದುಂ ೧೨

ಮತ್ತೆನಾ ಬಸುರೆಂದು ಬುತ್ತಿಬೋನ್ಹದ ಮಾಡಿ
ಒತ್ತಿ ಒಳ್ಳೊಳ್ಳಿ ಹರಿಸಿದ್ದೆನೆ । ಆಗ
ಚಿತ್ತೆಲ್ಲ ನಾನಲ್ಲಿ ಇರಿಸಿದ್ದೆನೆ । ನನ್ನ
ಸುತ್ತಲೆ ಯಾರಿಲ್ಲ ಕುಳಿತಿದ್ದೆನೆ । ಒಳ್ಳೆ ॥
ಹೊತ್ತು ನೋಡಿ ಬಂದು ಮುತ್ತಿಕೊಂಡಿತೊಂದು-
ತುತ್ತಾರ ಬಿಡಲಿಲ್ಲ ತುಡಗಿನ ಮಂಗ ದುಂ ೧೩

ಹುಡಗೇರೆಲ್ಲರು ಕೂಡಿ ಕಡಲಿ ಕೊಬ್ಬರಿ ಕಬ್ಬು
ಹಿಡಕೊಂಡು ಹೋಗಲು ತುಡಕಿತವ್ವ । ಗಲ್ಲ
ಹಿಡಿದೆನ್ನ ಮಾರಿಯು ನೋಡಿತವ್ವ । ಉಟ್ರೆ
ಸಡಿಲಿಸಿ ನಿರಿಗೆಗಳ ಕಳಚಿತವ । ದೊಡ್ಡ ॥
ಕಡುವನಂತ ಮೂಳ ಕಾಲಾಗ ಬಂದಿತು
ಉಡಿಯ ಚೆಲ್ಲಿಕೊಂಡು ಓಡಿತ ಮಂಗ ದುಂ ೧೪

ಲೋಕದೊಳೆಲ್ಲೆಲ್ಲ ನಾಕಾಣೆನಿಂತ್ಹಾದು
ಸಾಕು ನಾಕಾದೀತು ಜನ್ಮಕೀಗ । ಇದರ
ಕಟಕಟಿ ಬಹಳವ್ವ ಅದರುಷ್ಟಕ । ಬೆಂಕಿ
ಹಚ್ಚಲೆವ್ವ ಮಾಡುವ ಬಾಳುವಿಗೆ । ಮುದದಿ ॥
ಶ್ರೀ ಕುಂದಗೋಳ ಭೂಕಾಂತ ಗುರುವಿಗೆ ನಾನು
ಕಾಯು ಒಡೆದೇನಿ ನಾಯಲಿ ಮಂಗ ದುಂ ೧೫

# ಬೀಸುವ ಹಾಡುಗಳು

*** ಹೊರಮುಚುಕ:—**

ಹಾಡುವುದು ಹೆಣ್ಣಿಗೆ ನಿಸರ್ಗದ ದೇಣಿಗೆ. ಅವಳಿಗೆ ಅವಳ ಜೀವನವೇ ಹಾಡಾಗಿ ಪರಿಣಮಿಸಿದೆ. ಅವಳಿಗೆ ತಿಳಿಯದ ವೇದ ಬೇಕಿಲ್ಲ; ಹೊಳೆಯದ ಶಾಸ್ತ್ರ ಸಾಕೆಂದು ಅವೆಲ್ಲವುಗಳ ತಿರುಳನ್ನೇ ನಿತ್ಯಜೀವನದ ಅನುಭವಗಳಲ್ಲಿ ತನಗೆ ಗೊತ್ತಾಗದೆ ಹಾಡಿದ್ದಾಳೆ.

ಬೀಸುವ ಹಾಡುಗಳು ಕನ್ನಡ ಗರತಿಯರ ಪ್ರಪಂಚ ದರ್ಶನ, ಬಾಳ್ನುಡಿ ಬೆಳಕನ್ನು ಇಲ್ಲಿ ಕಾಣಬಹುದು.

ಗೆಳತೀ ! ಹನಿಗೂಡಿದರ್ಹಳ್ಳ
ಹನಿಹನಿಗೂಡಿದರ್ಹಳ್ಳ
ತೆನಿತೆನಿ ಗೂಡಿದರ ರಾಸಿ
ಮನಕ ಮನಗೂಡಿದರ ಮನಿಮಾರ ॥ ಗೆಳತೀ ॥

ಎಂಬುದೇ ಆ ಪ್ರಪಂಚದರ್ಶನದ ಸೊಲ್ಲು. ಇದೇ ಅರ್ಥ ಶಾಸ್ತ್ರದ ಜೀವಾಳ; ಸಮಾಜ ಶಾಸ್ತ್ರದ ಅಡಿಗಲ್ಲು. ಈ ಹಾಡುಗಳ ಲ್ಲಿಯ ಭಾವತರಂಗಗಳೇ ಸಂಸಾರ ಸಾಗರದಲ್ಲಿ ಆತ್ಮ ಪ್ರಯಾಣಕ್ಕೆ ಜೀವನ ಸೋಪಾನ. ಪ್ರಪಂಚ ದೃಷ್ಟಿಯಲ್ಲಿ ಅವುಗಳಲ್ಲಿ ಬಾರದ ವಸ್ತುಗಳೇ ಇಲ್ಲ. ಅವುಗಳನ್ನು ರಾಗರಾಗಿಣಿಗಳಲ್ಲಿ ತನಗೆ ಬೇಕಾದಾಗ ಸೊಲ್ಲಿತ್ತಿ ಹಾಡದ ಕನ್ನಡ ಹೆಣ್ಣೇ ಇಲ್ಲ.

* ಹೊರಮುಚುಕವು ಹಳ್ಳಿಗರ ನುಡಿಯಲ್ಲಿ 'ಅಂತರ್ದರ್ಶನ'; ಕೇವಲ ಸ್ಪರ್ಶದಿಂದ ಒಳಮೈ ತೋರಿಸುವ ಒಂದು ಗಿಡಮೂಲಿಕೆ.

# ತಿಳಿನುಡಿಗಳು

ಅಲ್ಲ ಅಂಗಡ್ಯಾಗ, ಬೆಲ್ಲ ಬಾಜರದಾಗ
ಎಲ್ಲರ ಮಾತ ಮನದಾಗ । ಇಟಗೊಂಡು
ಬೆಲ್ಲಷ್ಟೇದಾಗಿ ಬರುವೀನಿ ॥

ಬೇವಿನ ಆ ಗಿಡಕ, ಬೆಲ್ಲದ ಕಟ್ಟೆ ಕಟ್ಟಿ
ಜೇನ ತುಪ್ಪದಲಿ ಹೊಯ್ನೀರ । ಹಣಿಸಿದರ
ಬೇವು ತನ್ನಿಸವ ಬಿಡಲಿಲ್ಲ ॥

ಜೀವಕ ಬರದರ, ತಾಯಾರ ತಂದ್ಯಾರ
ಮೈದೂನರ್ಯಾರ ಮಗನ್ಯಾರ । ಸಾವಾಗ
ಕೈಹಿಡಿದರಾಯ ಕಡೆಗಾದ ॥

ಮಾತಿಗೆ ಮಲಕಿಲ್ಲ, ನೀತಿಗೆ ತೊಡಕಿಲ್ಲ
ಸಾಸಿಕಾಳಿಗೆ ಹುಳಕಿಲ್ಲ । ಅತ್ತಿಮನಿ
ಸೋಸಿ ನಡದರು ಅರಿಕಿಲ್ಲ ॥

ಸತ್ತು ಹುಟ್ಟುದೊಲ್ಲೆ, ಸಾವಗಂಡನ್ನೊಲ್ಲೆ
ಸತ್ತಿಕರ ಮಗಳ ಗೌವರವ್ವ । ನಿನ್ನಂತ
ಮುತ್ತೈದಿತನವ ಕೊಡು ನಮಗ ॥

ಹಿರಿಯರಿಗೆ ಹಿರಿಯನ್ನು, ಕಿರಿಯರಿಗೆ ಕಿರಿಯನ್ನು
ನೆರೆಗಡ್ಡದವರ ಮುದುಕರ । ಕಂಡರ
ತಲೆಬಾಗಿ ನಡಿಯೊ ನನ ಮನವ ॥

ಕಾಣದ ಮಾತಿಗೆ, ಖಂಡಗಂದರೇನ
ಬಂಡಮಾಡವರ ಗೊಡವೇನ । ತುಂಬಿದ
ಬಂಡಿ ನಡೆದ್ಹಂಗ ನಡೆಪೇನ ॥

ಕೊಟ್ಟು ಕುದಿಯಲು ಬೇಡ, ಇಟ್ಟು ಹಂಗಿಸಬೇಡ
ಇಷ್ಟುಂಡರೆಂದು ಅನಬೇಡ। ಈ ಮೂರು
ಮುಟ್ಯಾವ ಶಿವನ ಸದರಿಗೆ ॥

ಸಂಗಮಾಡೇನವ್ವ, ಲಿಂಗವಂತರ ಕೂಡ
ಬಂಗಾರಕಿಂತ ಬಲು ಹೆಚ್ಚು। ಇದ್ದವರ
ಸಂಗಮಾಡಿನಿ ಅನುಗಾಲ ॥

ಕಾಚುಕಾಡಿಗೆ ಹೀನ, ಊಚ ನಾಲಗೆ ಹೀನ
ಆಚಾರಹೀನ ಗರತಿಯು। ಮನ್ನಿ ಮುಂದ
ಮೀಸಿ ಬಂದಣ್ಣನ ನಗೆಹೀನ ॥

ತನ್ನಂತೆ ನೋಡಿದರ, ಭಿನ್ನ ಭೇದವನಿಲ್ಲ
ತನ್ನ ಹೊಟ್ಟೆಯ ಸಿಸುವಂತೆ। ನೋಡಿದರ
ಕಣ್ಣ ಮುಂದೈತೆ ಕೈಲಾಸ ॥

# ತವರು ಮನೆ

ಕಡಗವಿಲ್ಲದ ಕೈಯು, ಡಿಡಗವಿಲ್ಲದ ಹೊಳೆಯು
ಹಡದವ್ವ ಇಲ್ಲದ ತವರಿಽಗೆ । ಹೋದಽರ
ನಡುದಾರ್ಯಾಗ ಪಸ್ತಿ ಹೋದ್ಹಾಂಗ ॥

ಮಳೆಯು ಬಂದರು ಬರಲಿ, ಮರದಽ ಮೇಲಿರುವೆ
ಮಳೆ ನಿಂತ್ರು ಮರದ ಹನಿ ಬಿಡದ । ಹಡದವ್ವ
ನೀಬಿಟ್ರೆ ನಿನ್ನ ಮನ ಬಿಡದ ॥

ಕಾಸಿಗೆ ಹೋಗುದಕ, ಏಸುದಿನ ಬೇಕವ್ವ
ತಾಸ್ಹೊತ್ತಿನ ಹಾದಿ ತವರಿಽಗೆ । ಹೋದಽರ
ಕಾಸಿ ಅದಾಳ ಹಡದವ್ವ ॥

ಹಡದವ್ವದಾಳೆಂದು, ಬಡಬಡ ಒಳಗ್ಹೋದೆ
ಒಳಗ ಹಡದವ್ನ ಸೊಸ್ತೆಽರ । ಸಪ್ಪಳಕ
ತುವಿಗಟ್ಟಿತಳಗ ತಿರುಗೇನ ॥

ಬಡವರು ಬಗ್ಗರು, ಹೆಡಗಿ ಬುಟ್ಟಿಯವರು
ಹೋಗರಿ ನನ್ನ ತವರಿಗೆ । ಅಣ್ಣಯ್ಯ
ದರುಮದ ಹಗೆಯ ತಗೆದಾನ ॥

ಹಾಲುಂಡ ತವರೀಗೆ, ಏನೆಂದು ಹಾಡಲಿ
ಹೊಳೆದಂಡೆಲಿರುವ ಕರಕೀಯ । ಕುಡಿಯಂಗ
ಹಬ್ಬಲಿ ಅವರ ರಸಬಳ್ಳಿ ॥

ಒಳ್ಳೆಸುತ್ತಲಕ್ಕಿ, ಕಲ್ಲಸುತ್ತಲಿ ಜೋಳ
ನಾಲಗೆ ಸುತ್ತಲು ಸುಲಿಹಲ್ಲು । ತಾಯವ್ವ
ನಾರಿ ನಿನಸುತ್ತ ಸರುಬಳಗ ॥

ಅಕ್ಕಿ ಕಿಚಡಿ ಮಾಡಿ, ತುಪ್ಪ ಬೆಚ್ಚಗ ಮಾಡಿ
ಸುತ್ತೇಳು ನಿರಿಗೆ ಮರೆಮಾಡಿ। ಉಣಿಸುವ
ಹೆತ್ತವ್ವನಿಲ್ಲ ಮನೆಯಾಗ ॥

ಉಂಡೇನ ಉಟ್ಟೇನೆ, ತಂದೆಯ ಪುಣ್ಯೇವ
ಉಂಡೀನೆ ತಾಯಿ ಮೊಲೆಹಾಲ। ಅದರ್ಹಂಗ
ಗಂಡ ಮಗನೇನ-ಗಳಿಯಾಕ ॥

ಕಣ್ಣು ಕಾಣುವತನಕ, ಬೆನ್ನು ಬಾಗುವತನಕ
ತಾಯಿಯಿರಲಿ ನನಗ ತವರಿರಲಿ। ನನ್ನವ್ವ
ಅಣ್ಣಯ್ಯರಿರಲಿ ಕರಿಸಾಕ ॥

ತಂಗಾಳಿ ನೆನದ್ಹಾರ ತಂಗಳು ಬಿಸಿಯಾದೆ
ತಿಂಗಳದ ತಲೆಯು ಮಡಿನಾದೆ। ತಾಯವ್ವ
ಗಂಗಾದೇವಿಯ ನೆನೆದಾಗ ॥

ಯಾರು ಇದ್ದರು ನನ್ನ, ತಾಯವ್ನ ಹೋಲಾರ
ಸಾವಿರದಕೊಳ್ಳಿ ಒಲಿಮುಂದ। ಇದ್ದರ
ದೀವಿಗೆ ನಿನ್ನ ಹೋಲಾವ ॥

ತಾಯಗಲಿ ಬಂದೀನಿ, ತಾಳಲಾರೆನು ಬಿಸಲ
ಬೇಗ ಹಾಸಣ್ಣ ಹರಗೋಲ। ಗಂಗವ್ವ
ನಿನ್ನಂಥ ತಾಯಿ ಅಗಲೇನ ॥

ಊರ ಮುಂದಣ ಗಾಳಿ, ಏನಂತ ಬೀಸ್ಯಾವ
ಆಲೀಸಿ ಕೇಳ ಹಡದವ್ವ। ನಿನ ಮಗ
ಹಾಡ್ಯಾಡಿ ಹಂತಿ ಹೊಡದಾನ ॥

ಲಿಂಬಿಹಣ್ಣಿನ್ಹಾಂಗ, ತುಂಬೇತಿ ನನ ಬಳಗ
ಹಂಗೂಸಿ ರಾಯ ಬೈಬ್ಯಾಡ। ತವರೂರ
ಹಿಂಡಿನನ್ನಾಕಿ ಅಗಲೇನ ॥

ನೀರ್ಹೊಳಿ ದಾಠ್ಯಾಗ, ತಾಯವ್ನ ಕಂಡೀರಿ
ಯಾರಂತಾಕಿ ನನ್ನ ಹಡದವ್ವ . ಮೂಗುತಿ
ಹರಳಿನಂತ್ಹಾಕಿ ತಾಯವ್ವ ॥

ಹುಗ್ಗಿ ಹೂರಣಗಡುಬು, ಮಗ್ಗಿ ತಾಳಲಗಾಯಿ
ಒಗ್ಗರಣಿ ಸೋರಿ ಹದಿಸಾರು । ಹಡದವ್ನ
ಒಡ್ಡೀನ ಹೊಲದ ಚೆರಗಾವ ॥

ಬಂಡಿ ಬಂಡೀಯವರು, ಬಂಡಿನಾಗರದವರು
ಹಿಂಡೆತ್ತಿನವರು ತವರವರು । ಬರುವಾಗ
ಒಂದೆತ್ತಿನಣ್ಣ ಬದಿಗಾಗೊ ॥

ಅಣ್ಣಾನ ಆರೆತ್ತು, ತಮ್ಮನ ಮೂರೆತ್ತು
ನಮ್ಮಪ್ಪನೆತ್ತು ಹದಿನಾರು । ಬರುವಾಗ
ನನ್ನೂರ ಭೂಮಿ ನಡುಗ್ಯಾವ ॥

ತಂದೆ ನನ್ಹಡದವ್ವ, ಒಂದು ಬಳುವಲಿ ಕಳಿಸು
ಅಂಗಳ ತುಂಬ ಎಳೆಗರ । ತವರೂರ
ಜಂಗೂಳಿ ಬಂದ್ರ ಕರೆಯಾಕ ॥

ತಾಯಿ ಕಟ್ಟಿದ ಬುತ್ತಿ, ತರತರಕ ಯಾಲಕ್ಕಿ
ತಾಯಿ ನನ್ನವ್ವ ಗರತ್ಯಾಯ । ಕಟ್ಟೀದ
ಬುತ್ತಿ ಬಿಚ್ಚೇನ ಹೊಳಿಯಾಗ ॥

ದಾಸ್ಯಾಳ ಹೂವೀಲೆ, ನೇಸ್ಯಾಳ ಕುಂಚೀಗಿ
ದೇಶಕ ಹಡದವ್ವ ಕಳುಹ್ಯಾಳ । ನನ್ನೂರ
ದೇಸಾಯಿ ಕಂಡು ಬೆರಗಾದ ॥

ಬೇದಂತ ಬೇಗಳ, ಬೆನ್ಹತ್ತಿ ಬಾರ್ಯಾವ
ಕೋದಂತ ಕುಸುಬಿ ಚಿಗಿಯ್ಯಾವ । ಹಡದವ್ನ
ಬೇದವರ ವಂಶ ಹುರಿಯ್ಯಾಲೆ ॥

ಲಿಂಬಿಯ ಗಿಡ ಹುಟ್ಟಿ, ಲಿಂಗಕ ನೆರಳಾಗಿ
ನೆಂಬಿಗಿ ಬಕುತ ನನ ತಮ್ಮ । ಮನಿಯಾಗ
ಜಂಗಮರುಣ್ಣೂದು ಕಡೆಯಿಲ್ಲ ॥

## ಗಂಡನ ಮನೆ

ಅಲ್ಲದಂತ್ತೀಗೆ, ಬೆಲ್ಲದಂತ ನಾದೂನಿ
ನೆಲ್ಲಿಕಾಯಂತ ನೆಗೆಣ್ಣಿ । ಕೂಡಾಡಿ
ಕಲ್ಯಾಣ ತವರ ಮರತೇನ ॥

ಅತ್ತೀಯ ಮನಿಯಾಗ, ಹತ್ತೆಂಟು ಬೇದಾರ
ಹಚ್ಚಿಕೋ ಬ್ಯಾಡ ನನ ಮಗಳ । ಜನವೆಲ್ಲ
ಗಂಗವ್ವನೆಂದು ಕರೆದಾರ ॥

ಗಂಡನ ಈ ಮನೆಯು, ಗಂಡನಾರಿಯ ಮುಳ್ಳ
ಕುಂಡರಗೊಡರ ನಿಲಗೊಡರ । ಬೇಗಿಗೆ
ಕಂದಗ ಮಲೆಯ ಕೊಡಗೊಡರ ॥

ಹುಚ್ಚನಂತ ಗಂಡ, ಹುಲಿಯಂತ ಮೈದೂನ
ನಿಚ್ಚಪಂಡಿತಳು ನೇಗೆಣ್ಣಿ । ಕೈಯಾಗ
ಹುಚ್ಚಿ ನಾ ಹ್ಯಾಂಗ ನಡಿಯಾಲಿ ॥

ಮಾರಾಯ ಬೇದಾರ, ಬಾರಾವು ಕಣ್ಣೀರು
ಮಾರಾಯ್ರ ತಮ್ಮ ಮೈದೂನ । ಬೇದಾರ
ಮಾಡಿಲ್ದ ಮಳೆಯು ಸುರಿದ್ಹಾಂಗ ॥

# ಬಸಿರು ಬಯಕೆ

ತಂಬಿಟ್ಟು ತಿಳಿದುಪ್ಪ, ನಿಂಬಿ ಉಪ್ಪಿನಕಾಯಿ
ರಂಬಿ ನನ ತಂಗಿ ಬಸರಂತ । ಹೇಳ್ಯಾನ
ಹಂಪಿಸಾಗರದ ಬಣಜೀಗ ॥

ಬಂಗಾರದ ಬಳಿಯೊತ್ತಿ, ದುಂಡ ಕಂಕಣವೊತ್ತಿ
ಗೊಂಡೇವು ಒತ್ತಿ ಮಲಗ್ಯಾಳ । ನನ ತಂಗಿ
ದಂಡನಾಳವನ ಬಂಕೀಲಿ ॥

ಸಂತೋಷದ ಸುದ್ದಿ, ಸಂತ್ಯಾಗ ಕೇಳೀನಿ
ಕೆಂಚಿ ನನ ತಂಗಿ ಬಸರಂತ । ಹೇಳ್ಯಾನ
ಹಂಪಿಸಾಗರದ ಬಣಜೀಗ ॥

ಸಜ್ಜೀಯ ರುಚಿ ರೊಟ್ಟಿ, ಸಜ್ಜಕದ ಹೋಳೀಗಿ
ಗಜ್ಜೂರಿ ಚಟ್ನಿ ಎಳ್ಳೆಣ್ಣಿ । ತಂಗೆವ್ವ
ಗುಜ್ಜಿ ನಿನ ಬಂಕಿ ತಿಳಿಯಾವ ॥

ಕಂದನ ಕೊಡುತಿವನ, ಬಂದನ ಬಡಲಾಕೆ
ಹಂಗಿನ ಬಾನ ಉಣಲಾರೆ । ಜನದಾಗ
ಬಂಜೆಂಬು ಸಬುದ ಹೊರಲಾರೆ ॥

ಆಡುಮಕ್ಕಳ ಕಂಡು, ಬೇಡಿತ್ತ ನನ ಜೀವ
ಕೇಳಿದ್ದನೇನ ಶಿವರಾಯ । ಹೊಟ್ಟ್ಯಾಗ
ಮೂಡಿದ್ದನೇನ ಮಗರಾಮ ॥

ಹೆಣ್ಣು ಜನುಮಕ ಬಂದೆ, ಮಣ್ಣು ಮಾಡಲಿಬ್ಯಾಡ
ಹೆಣ್ಣುತನ ಶಿವನೆ ಜಗದಾಗ । ಕೈಮುಗಿವೆ
ಕಂದಯ್ನ ಕೊಟ್ಟು ಕಡಿಮಾಡು ॥

ಕೂಡಲ ಸಂಗಯ್ಯ, ನೀಡು ಮಕ್ಕಳ ನನಗ
ನನಗಲ್ಲ ನನ್ನ ಗೆಳತೀಗೆ । ಕೊಟ್ಟರ
ಬಾಗಿಲಕ-ಹೊನ್ನ ಬಡಿಸೇನ ॥

ಬಂಜೀಯು ಮನಿಮುಂದ, ಸಿಂಗಾರ ಗಿಡ ಹುಟ್ಟಿ
ಕೊಂಗಿಕೊಂಗೀಲಿ ಗಿಳಿಕೂತು । ಓದ್ಯಾವ
ಬಂಜಿ ನಿನ ಬದಕು ಹೆರವರಿಗೆ ॥

ಹತ್ತು ಗಂಡ್ಹಡದರೂ, ಮತ್ತೆ ಬಂಜೆಂಬೂರು
ದಟ್ಟೀಯು ಉಡುವ ಧರಣೀಯು । ಹಡೆದರ
ಹೆತ್ತಾಯಿಯೆಂದು ಕರೆದಾರ ॥

ನಾಕ ಮಕ್ಕಳ ಕೊಟ್ಟು, ನಾಕು ಮಾಡೊ ಶಿವನೆ
ನಾಕರ ಮ್ಯಾಲೆ ಆರೂತಿ । ಹಿಡಿಯಾಕ
ನಾರಿಯು ಕೊಟ್ಟು ಕಡಿಮಾಡೊ ॥

ಗಂಡ ಮಗನ ಬೇಡಿ, ಬಂಡಿಲಿ ಬಾಗೇವ ಬೇಡಿ
ಗಂಡಗಾಸೇವ ಘನಬೇಡಿ । ನನ ಮಗಳು
ತಿಂಗಳೊಂದೊತ್ತು ಹಿಡಿದಾಳ ॥

ಬಸರು ಇರುವೆನೆಂದು, ಖುಸಿ ಬಹಳ ಮನದಾಗ
ಹಡೆದೆ ನಾನೆಂಬ ಹವಣಿಕೆ । ಸಂಗಯ್ಯ
ಕರುಣ ತಪ್ಪಿದರ ಮರಣಾವು ॥

# ಮಕ್ಕಳು

ಹಸುಮಕ್ಕಳಾಡಿದರ, ಹಸಸವ್ವ ಅಂಗಳ
ದೆಸಿಮುಖದ ಚೆಲುವ ಮುಗರಾಮು । ಆಡಿದರ
ಹಸನ ಹಡದವ್ವ ಅರಮನೆ ॥

ಹಚ್ಚನ್ನ ಪೈರಿಯಾಪ, ಹವಳದ ತುಟಿಯಾವ
ಎಲ್ಲಿಗ್ಹೋಗಿದ್ದಿ ಗಿಳಿರಾಮು । ತವರೂರ
ಉತ್ತತ್ತಿ ವನಕ ಉಲುವಿಲ್ಲ ॥

ದೇಶದೇಶದ ಮಂದಿ, ಕಾಸಿಗೆ ಹೋಗತಾರ
ಕೂಸು ಕಂದವ್ವ ಒಳಹೊರಗ । ಆಡಿದರ
ಕಾಸಿ ಪರವೂತ ನನಗಾವೆ ॥

ಆಗರದನ್ನ ಗಿಣಿಯೆ, ಮೂಗು ಸಂಪಿಗಿ ತೆನಿಯೆ
ಯಾರನ್ನ ಹೋತಿಯೆ ನನ ಕಂದ । ಇನಿಯರ
ರೂಪುಚ್ಚಿ ನನ್ನ ಉಡಿಯಾಗ ॥

ನಡಗರ ಸಂಪತ್ತು, ಯಾರಿಂದ ಹಡದವ್ವ
ಕಡೆವ ಹಾಕೀರು ಮಗನಿಂದ । ಹೊಸ್ತಿಲ
ದಾಟೇರಿ ಬರುವ ಸೊಸಿಯಿಂದ ॥

ಕಂದವ್ವ ಕಾಡಿದರ, ಸುಂದವ್ವ ಮನೆದಗದ
ರಿಮ್ಮರಿಮ್ಮನ್ನು ಹಲಗಿ । ತೊಟ್ಟಿಲದಾಗ
ಕಂದವ್ವ ಕಾಡಿ ಮಲಗ್ಯಾನ ॥

ಗಂಡು ಮಗನೆ ಬಾರೊ, ಚೆಂಡು ಚೆತ್ತನ ಬಾರೊ
ದುಂಡ ಮುತ್ತಿನ ಸರ ಬಾರೊ । ಕಂದವ್ವ
ಬಂಗಾರ ಬಾರೊ ಬೈಲಿಗೆ ॥

ಬಡತನ ಬಂದರ, ಬಡಿಬ್ಯಾಡ್ರಿ ಮಕ್ಕಳನ
ಆಡ್ಯಾಡಿ ಬಂದು ತೊಡಿಮ್ಯಾಗ । ಕೂತರ
ಬಂದ ಬಡತನ ಬಯಲಾಗಿ ॥

## ಗಂಡ ಹೆಂಡರು

ಹೊನ್ನಿನ ಮಳೆ ಬಂದ, ಚಿನ್ನದ ಕೆರೆ ತುಂಬಿ
ಕಿನ್ನುರಿ ಮಾಟದ ಹೊಳಿ ಬಂದು । ರಾಯರ
ಸಣ್ಣಕ್ಕಿ ಹೇರ ತರಿಬ್ಯಾವ ॥

ಗಂಡ ಹೆಂಡರ ಜಗಳ, ಗಂಧ ತೀಡಿದ್ಹಂಗ
ಲಿಂಗಕ ನೀರ ಎರಿದ್ಹಾಂಗ । ಹಿರಿಹೊಳಿ
ಗಂಗವ್ವ ಸಾಗಿ ಹರಿದ್ಹಾಂಗ ॥

ಸಿಟ್ಟು ಮಾಡುವಿರೇನು, ಸಿರಿಯರು ನನಮ್ಯಾಲೆ
ಕಟ್ಟಿಕೋಬ್ಯಾಡ್ರಿ ವೈಮನವ । ತಾಯ್ತಂದಿ
ಕೊಟ್ಟು ಹೋಗ್ಯಾರ ನಿಮ್ಮನಿಗೆ ॥

ಕಾಮಕಸ್ತುರಿ ನಿನ್ನ, ಕಾಣದಲೆ ಇರಲಾರೆ
ಮಲ್ಲೀಗೆ ನಿನಮಾಯ ಬಿಡಲಾರೆ । ಸಮುದರದ
ಮುತ್ತ ನಿನ್ನಗಲಿ ಇರಲಾರೆ ॥

ಕಾಣದಲೆ ಇರಲಾರೆ, ಕನ್ನುಡಿ ಮುಖದವರ
ಕಾಮನಗಿಂತ ಚೆಲುವರ । ಚೆನ್ನಿಗರ
ಕಾಣದರಗಳಿಗೆ ಇರಲಾರೆ ॥

ಆಸಾಡ ನೀ ಗಾಳಿ, ಬೀಸ ನನ್ನರಮನಿಗೆ
ಲೇಸು ಮಾರಾಯರ ಮಂಚಕ । ಸುತ್ತಿರಗಿ
ಬೀಸು ಸೂವರದ ಸುಳಿಗಾಳಿ ॥

ಬಾಗೇದ ಲಕ್ಕಸವಿು, ಬಾಗಿಲಕ್ಯಾಕದಿಯು
ನೇಗಿಲ ಬಂದೆತ್ತು ತುಳಿವಾಪ । ರಾಯರ
ತೂಗ ಮಂಚಕ ಇರಬಾರ ॥

ಸಾವಿರ ಕೊಟ್ಟರು, ಸವತಿಯು ಮನಿಬ್ಯಾಡ
ಸಾವಿರದಮ್ಯಾಲ ಐನೂರು । ಕೊಟ್ಟರು
ಮಲಮಕ್ಕಳಿರುವ ಮನಿಬ್ಯಾಡ ॥

ಸವತಿ ಸವತೆರ ಜಗಳ, ಪಟ್ಟೆಮಂಚದ ಮ್ಯಾಲೆ
ಹೊನ್ನನರ ಹರಿದು ಬಳಿ ಒಡೆದು । ನನ ಸವತಿ
ವಾಲಿ ಕಿತ್ತ್ಯೋಯ್ತು ಬಿಡ ಸೆರಗ ॥

ಸಾವುತನಕ ಬಿಡದು, ಸವತಿ ಮಕ್ಕಳ ಜಗಳ
ಸರಿ ಮನ್ಯಾಗಿರುವ ನೇಗೆಣ್ಣಿ । ನಿನ ಜಗಳ
ಬ್ಯಾರ್ಯಾಗುತನಕ ಬಿಡಲಿಲ್ಲ ॥

ಹಡೆದ ತಾಯಿಯು ಮುಂದ, ಹಾಲುಕುಡಿದರು ಸಿಂದ
ಮಲತಾಯಿ ಮುಂದ ಮರಿಗುದರಿ । ಏರಿದರ
ಮನದಾಗ ಲಟಕ ಮುರಿದಾಳ ॥

ಹಾಸೀಗೆ ಹಾಸೆಂದ, ಮಲ್ಲೀಗಿ ಸೂಸೆಂದ
ಬ್ಯಾಸತ್ರ ಮಡದಿ ಮಲಗೆಂದ । ಚೆಂಜೀಕಿ
ತನ್ನೋಡಿ ತವರ ಮರೆಯೆಂದ ॥

ಚಿಂತಾಕ ಇಟಗೊಂಡು, ಬೆಂಕಿಗ್ಹೋಗುವ ನಾರಿ
ಚಿಂತಿ ಇಲ್ಲೇನ ನಿನಗೇಟು । ನಿಮರಾಯ
ಕೆಂಚೇರಗೂಡ ನಗತಾನ ॥

ನಕ್ಕರ ನಗಲೆವ್ವ, ನಗೆ ಮಾರಿಕ್ಯಾದೀಗೆ
ನಾ ಮುಂಚೆ ಮುಡಿದ ಪರಿಮಳ । ಪಚ್ಚೇದ್ಹೂ
ಅವಳೊಂದು ಜಾವ ಮುಡಿಯಲೆ ॥

ತಂದಾರ ತರಲೆಂದೆ, ತಂಗ್ಯಾಗಿ ಇರಲೆಂದೆ
ಸಾ ಬಿಟ್ಟೆ ಜವಳಿ ಉಡಲೆಂದೆ। ನನಗಾಕಿ
ಜೋಡಾಗಿ ಕೂಡಿ ಇರಲೆಂದೆ ॥

## ಬಾಳು

ಆನರಕಿ ಅಳದಿಟ್ಟ್ಯೋ, ಬ್ಯಾನರಕಿ ಒಳದಿಟ್ಟ್ಯೋ
ಚಿಂತಿ ಕಾಲಾಗ ತುಳದಿಟ್ಟ್ಯೋ। ಈ ದೇಹ
ಶೀಲ ಮಾಡಿಟ್ಟೆ ಜನದಾಗ ॥

ಕನ್ನೀಯ ಬಡಿಬ್ಯಾಡ, ಕೈಬಳಿ ಒಡೆದಾವು
ಸಣ್ಣಂಚಿನ್ಸಾಲಿ ಮುರಿದಾವು। ನನ ಮಗನ
ನನ್ರಾಣಿ ಮಡದಿ ಬಡಿಬ್ಯಾಡ ॥

ಛೀ ! ಏಳ ಛೀಮಾರಿ, ನಾಚಿಕಿಲ್ಲದ ನಾರಿ
ಗಂಡನ್ನ ಬೈವ ಗೈಯಾಳಿ। ಗಂಡಸ್ವಗ
ಆಂವ ಇಂವನೆಂದು ಕರದಾಳ ॥

ನನ್ನ ಬೈದರು ಬೈಯ್ಯೋ, ಬೆನ್ನ ಬೈಯಲಿಬ್ಯಾಡ
ಬೆನ್ನಿಂದ ಬೆಂಕಿ ಒಯ್ಬ್ಯಾಡ। ನನಗೊಬ್ಬ
ತಮ್ಮ ಇರವೂನ ಅರ್ಜೂನ ॥

ಅಣ್ಣತಮ್ಮರ ಜಗಳ, ನಿನ್ನೆ ಮೊನ್ನ್ಯಾಗ್ಯಾವ
ಬಣ್ಣ ಬಾಗೀಲ ಎರಡಾಗಿ। ಕಡೆಮಗನ
ಸಣ್ಣವನಾಗಿ ಸರಕೋರೊ ॥

ಊರ ಮ್ಯಾಗಲ ಊರ, ದಾರಿಮ್ಯಾಗಲ ಮನೆಯು
ಬಾರದ್ಯಾಕ್ಹೋದ ನನ್ನಣ್ಣ। ನಿನ ಮಡದಿ
ಬ್ಯಾಡಂದಳೇನೊ ನನ ಮನೆಗೆ ॥

ನೆಗಣ್ಣಿ ಮಾತೇನ, ಸೆಗಣಿಯು ದಂಟೇನ
ಗಾಳೀಗೆ ಬಂದ ರವದೀಯು । ಮಾತೀಗೆ
ಮಾರಾಯು ಮನನ ತೆಗೆದಾರ ॥

ಹೊಂದಿಕಿಲ್ಲದ ಮಾತು, ಹೊಂದಿಸ್ಯಾಡಲಿಬ್ಯಾಡ
ಬಂಧಾನ ನಾನು ಬಡಲಾರೆ । ಕಣ್ಣೀರು
ಮುಂದಿರಲಿ ಅವರ ತಿನುವೀಗೆ ॥

ಅಣ್ಣನ ಮಗಳಂತ, ಹಮ್ಮೀಲಿ ನಾ ತಂದೆ
ಉಣ್ಣಾಳ ಮುಸಕ ತಗಿಯಾಳ । ಅಣ್ಣಯ್ಯ
ಮನ್ನೂಣಿ ಹೇಳ ಮಗಳೀಗೆ ॥

ಮನ್ನೂಣಿ ಹೇಳಾಕ, ಹೊನ್ನೆಷ್ಟು ಅಳದೆವ್ವ
ಪುಣ್ಣೇಕ ದಾರಿ ಎರದೀನೆ । ತಂಗೆವ್ವ
ನೊನ್ನಿಲೆ ಮಗ್ಗ ಇರಹೇಳ ॥

ಊರಮ್ಯಾಗ್ಹಾಸಿ, ಬೀಸುವ ಬಿರುಗಾಳಿ
ತೀರಾವ ದುಃಖ ತೋಡುದಕ । ಹಡದವ್ವ
ಮಾರಿನೋಡಾಕ ಬರಹೇಳ ॥

ಹೆಂತಾದು ಮಾಡಿದರು, ಸಿಂತರಿಸಿ ಬಿಡವೂರ
ಹೆಂತಾದ ನನ್ನ ಕೈಗೂಣ । ಶಿವಲಿಂಗ
ಬೆಂಕಿಯಂತವರು ಅರುವಿರಲಿ ॥

ಅಲ್ಲದವರ ತಡವಿ, ಜಲ್ಲೆಂದ ನನ ಮನವ
ಕಲ್ಲಾಗ ಕಡ್ಡಿ ಒಡಿದ್ಹಾಂಗ । ನೆಗ್ಗೂಲ
ಮುಳ್ಳಾಗ ಹಾದಿ ತಗೆದ್ಹಾಂಗ ॥

ಒಡಹುಟ್ಟಿದವರಿಗೆ, ಒಡಜಾಲಿ ಮುಳ್ಳಾದ
ಹಡದವ್ವಗೀದ ಹುಲಿಯಾದ । ನನ ತಮ್ಮ
ಮಡದಿಗೆ ಮಾಣಿಕ ಹರಳಾದ ॥

ಹಡದವ್ವ ನೀ ನನ್ನ, ಹಡದೇನು ನಡಬೇಕ
ನಡುಬಟ್ಟಿಲೊಬ್ಬ ಇದಿರಂಡಿ। ಸೆಟಿಗವ್ವ
ಮನಬಲ್ಲ ಬರಿಯ ಬರಿದಾಳ ॥

ಆನೊತ್ರ ನನ ಮನೆಯು, ಬೇನೊತ್ರ ನನ ಮನೆಯು
ಕೂನು ಕಾಡಿದರು ನನ ಮನೆಯು। ತವರೂರು
ಏನು ದಿನ ಇದ್ರ ನೆರೆಮನೆಯು ॥

ಬೀಸುವ ಕಲ್ಲಿಗೆ, ಬಿಡಿಮುತ್ತು ರ್‍ಯಾವಳ
ಬೇಸ್ಯಾಗಿ ಹೊಯ್ಯೊ ಹೊಳೆಗಾರ। ನನ ಮನೆಗೆ
ಬೀಸ ಬರತಾರೊ ಗೆಳತೇರು ॥

ಹಾಡ್ಯಾಡಿ ಬೀಸೀನಿ, ಹವಳ ಬಣ್ಣದ ಗೋವಿ
ಬೀನಾಕ ಹಿಡದೀನಿ ಬಳಿಜೋಳ। ಅಣ್ಣಯ್ಯ
ಚ್ಯಾಜಕ ಹಿಡದೀನಿ ನಿನ ಮಗಳ ॥

ಏನನೀ ಬೀಸಿದರ, ಸಾಕಬೇಕೆನ್ನಳ
ಸಾಕ್ಷೇದ ತಾಯಿ ಸಿರಿಗೌರಿ। ಬೀಸೀದ್ದಿಟ್ಟು
ಸಾಕುನಾಕಾಗಿ ಬಳಗಕ ॥

ಕಲ್ಲ ಕೊಟ್ಟವ್ವಗ, ಎಲ್ಲ ಬಾಗೇಪಿರಲಿ
ಮಲ್ಲಿಗಿ ಮುಡಿವ ಮಗನಿರಲಿ। ಹೇಮ್ರಡ್ಡಿ
ಮಲ್ಲವ್ವನಂಥ ಸೊಸಿ ಇರಲಿ ॥

ಆದಾವ ನಮಜೋಳ, ತೀರ್‍ಯಾವ ನಮ ಹಾಡ
ನಾಕ ಗೌರವ್ವ ಕೈಬೀಡ। ನನ ಮನಿಯ
ಗ್ಯಾನದತ್ತೆವ್ವ ಬೈದಾಳ ॥

ಬೀಸೂವ ಕಲ್ಲಿಗೆ, ತೋಳಾಡಿ ತೊಡಿಯಾಡಿ
ನಾಗರ್ಹೆಡಿಯಂತ ನಡವಾಡಿ। ಗೌರವ್ವ
ನಿನ್ನಗೂಡಾಡಿ ದಣಿಯಾವ ॥

ಆಗೂವ ಮುಕ್ಕಿಗೆ, ನಾಯಾರ ನೆನೆಯಾಲಿ
ರಾಜೇವ ಸಲುವ ಬಸವಣ್ಣನ । ಹೇಣ್ಣೂತಿ
ನೀಲವನ ಹಾಡಿ ನಿಲಸೇನ ॥

## ಕರ್ನಾಟಿಕ ಕಂದ (ಕುಮಾರ ರಾಮು)

ಹರಲೀಯು ಕೊಡಲಾರೆ ।
ಕರಸಾಟಿ ಕಂದಽಗ ॥ ಪ ॥

ಹರಲೀಯು ಕೊಡಲಾರೆ, ಕರಸಾಟಿ ಕಂದಗ
ವರಬೊಲ್ಲ ತಂದ ಕೊಮರಾಗ । ಹ । ರಣದಾಗ
ತುರಕರ ಗೆದ್ದ ವೀರಾಗ । ಹ । ೧

ಕಥೆಯು ಕೇಳಿರಿ ಜನರೆ, ಮತಿಯಿಟ್ಟು ತೂಗುತಲಿ
ಸುತಗ ಮನಸಿಟ್ಟ ಕಲಿಯುಗದ । ಮಲತಾಯಿ
ಬತವ ಹಾಡೇವ ನಿಜಗತೆಯು ॥ ೨

ಹಿರಿಯುರಸಿ ಹರಿಯಾಲಿ, ಕಿರಿಯುರಸಿ ರತ್ನಾಲಿ
ಅರಸ ಕಂಪಿಲ ರಾಯುನಿಗೆ । ಕೊಮರಾಮ
ಅರಸ ಮಗನಾದ ಹೆಸರಾತು ॥ ೩

ಅರಮನೆ ಕೊಮರಾಮ, ಮರೆಯೂವ ರೂಪೇನ
ಅರಸಿ ರತ್ನಾಲಿ ಮನಸೋತ । ಮನದಾಗ
ಮರಗ್ಯಾಳ ರಾಮ ದೊರೆಯುದಕ ॥ ೪

ಅರಸ ಕಂಪಿಲರಾಯು, ಸರಸ ಬ್ಯಾಟಿಗೆ ಹೋದ
ಅರಸಿ ರತ್ನಾಲಿ ಮನಿಯಾಗ । ಮೋಹಿಸಿದ
ಎರಕ ಕೊಮರಾಮ ಎದಿಯಾಗ ॥ ೫

ಅಂಗಳದ ಬೈಲಾಗ, ಜಂಗಿ ಚಂಡಿನ ಆಟ
ದಂಗ ಬಡಿಸ್ಯಾನ ಕೊಮರಾಮ । ರತ್ನಾಲಿ
ಕಂಗೆಟ್ಟು ಸೋತು ನೋಡ್ಯಾಳ ॥ ೬

ಮೇಲ ಮಾಳಿಗಿ ಮ್ಯಾಲ, ನೀಳ ದಿಟ್ಟಿಯು ಬಿಟ್ಟು
ಹೋಳಿಯಾಡ್ಯಾಳ ಮೈಮರೆತು । ರತ್ನಾಲಿ
ಸೀಳಿ ಕೊಮರಾಮ ಎದೆಹೊಕ್ಕು ॥ ೭

ಸಮಯ ಕಾಯುವ ಕಳ್ಳ, ತಮವ ದೊರಕಿಸಿದ್ದಾಂಗ
ಕೊಮರಾಮ ಚೆಂಡ ಆಡುದಕ । ಪುಟಿಪುಟಿದು
ಚಮಕಿಸಿ ಚೆಂಡು ಒಳಮನಿಗೆ ॥ ೮

ಚೆಂಡು ಬೀಳುತ ನೋಡಿ, ಚೆಂಡಿ ರತ್ನಾಲಿ ಮುಚ್ಚಿ
ಲಂಡಾಗಿ ಚೆಂಡ ಕೊಡಲಿಲ್ಲ । ರಾಮನಿಗೆ
ಚೆಂಡ ತರಲಾಕ ಕಳಿಸ್ಯಾರ ॥ ೯

ರತ್ನಾಲಿ ಹಡದವ್ವ, ಚಿತ್ತರದ ಕೊಡಚೆಂಡ
ಕತ್ತಲಾಗೂದ ಆಡುದಕ । ಅರಮನೆಯು
ಹೆತ್ತಾಯಿ ಹಾದಿ ನೋಡ್ಯಾಳ ॥ ೧೦

ಕಂಡು ರಾಮನ ರೂಪ, ಚೆಂಡಿ ರತ್ನಾಲಿ ಸೋತು
ಹಿಂಡೊ ಕೊಮರಾಮ ಕಾಮೂಟೊ । ಕೂಡಾಡಿ
ಉಂಡು ಹಿಂಗೇಸೊ ಮನತಾಪೊ ॥ ೧೧

ಕಾಮನೀ ಕೊಮರಾಮ, ಕಾಮಿಸಿದೆ ನಾನೋಡಿ
ಕಾಮಾಟ ಕೂಡಿ ನೀನಾದೊ । ಮನದೊರೆಯೆ
ಪ್ರೇಮ ನಿನ ಮ್ಯಾಲೆ ಕೈಮುಗಿದೆ ॥ ೧೨

ತಾಯೆ, ! ತಂದೆಯ ಸತಿಯೆ, ನಾಯಿ ಮಾಡುವ ಕೆಲಸ
ಮಾಯೆ ನಿನಗ್ಯಾಕ ನನಮ್ಯಾಲೆ । ಹಡದವ್ವ
ಹೇಯ ಇಲ್ಲೇನ ನಿನಗೇಟ ॥ ೧೩

ಕಾಯಕಾಮನ ಗುಡಿಯೊ, ಹೇಯಮಾಡಲು ಬೇಡ
ತಾಯೆಂಬ ನುಡಿಯು ಬೇಡೆಸಗೊ । ಕೊಮರಾಮ
ಬಾಯೆನಗ ಕಾಮ ಕೈಕೊಟ್ಟ ॥ ೧೪

ಹೇಸಿ ಕೈಬಿಡ ತಾಯಿ, ಸೋಸಿ ನೋಡೀ ಮಾತ
ಮೂಸಿ ಹೊಲಸುಂಬು ಮನಸೇನ । ಕೊಮರಾಮ
ಹೇಸಿ ಕೈಕೊಸರಿ ಹೊರಹೋದ ॥ ೧೫

ಅರಸ ಹೋದವ ಬರಲಿ, ಹರಲೀಯ ನಾ ಕೊಡುವೆ
ಅರಚಣಕ ರಾಮ ತಲೆಹೊಡಿಸಿ । ಹಾಕಿಸುವ
ಹರಕೆ ನಾ ಹೊತ್ತೆ ದೇವರಿಗೆ ॥ ೧೬

ಕುಣಕಾಲಿ ರತ್ನಾಳಿ, ಕುಣಸಿಟ್ಟು ಮನಗ್ಯಾಳೊ
ಎಣಿಸುವರ್‍ಯಾರು ಹೆಣ್ಣೆದೆಯ । ಹೆಣ್ಣುಂದ
ಕುಣದಾಡಿ ಹೋದ ಮಾದೇವ ॥ ೧೭

ತಣಿದು ಬ್ಯಾಟಿಯನಾಡಿ, ದಣಿದು ಕಂಪಿಲರಾಯ
ಮನೆಹೊಕ್ಕು ಕಂಡ ಗಜಬಿಜಿಯ । ರತ್ನಾಲಿ
ಕೆಣಕಿ ನುಡಿಸಿದರು ಸುಮ್ಮಿರಲು ॥ ೧೮

ಮನದ ಮೋಹದ ಗಿಣಿಯೆ, ಗಣಿಸದಲೆ ಮಾತಾಡ
ಮನನೊಂದ ಕಾರಣವ ನನಗ್ಹೇಳ । ರತ್ನಾಲಿ
ಚಣದಾಗ ಹೊಡೆವೆ ಹಣಕರನ ॥ ೧೯

ನಮಿಸಿದೆನು ಕೇಳದಲೆ, ಕೊಮರಾಮ ಕೈಹಿಡಿದ
ಧುಮುಕೀಯ ಮಾಡಿ ಕಾಮಿಸಿದ । ರಕ್ಕಸನ
ಗಮನಿನ್ಹೆ ಕರೆಸಿ ತಲೆಹೊಡಿಸು ॥ ೨೦

ಕಾದ ಕಂಪಿಲರಾಯ, ಭೇದವೇನರಿಯದಲೆ
ಛೇದಿಸಲು ಸಿರವ ಹೇಳಿಸಿದ । ಮಗರಾಮ
ಸಾದು ಶಿವನೆಂದು ತಲೆಗೊಟ್ಟ ॥ ೨೧

ಹರಲೀಯ ರತ್ನಾಲಿ, ಜೋರಿಸಿ ಮಂಚಕ ಮಲಗಿ
ಹರಿಯಾಲಿ ಅತ್ತು ಚೀರಾಡಿ । ಕೂಗ್ಯಾಳೊ
ವರ ಮಂತ್ರಿ ಬೈಚು ತಿಳಿಹೇಳಿ ॥ ೨೨

ಹರಲೀಯ ಕೊಡತಾರಿ, ಕರನಾಟ ಕಂದಗ
ವರ ಬೊಲ್ಲ ತಂದ ಕೊಮರಾಗ । ರಣದಾಗ
ತುರುಕರ ಗೆದ್ದ ವೀರಗ ॥ ೨೩

## ಡಂಬಳ ಮಲ್ಲವ್ವ

ಸುಡಲಿ ಹೆಣ್ಣಿನ ಜಲುಮ ।
ಹೆರವರ ಕೈಯಲಿ ನಣ್ಣ ॥ ಪ ॥

ಹಡದವ್ವ ಹಡದಪ್ಪ, ಹಡವೇನು ನಡಬೇಕ
ಹಡೆದು ಹೆರವರಿಗೆ ಕೊಡಬೇಕ । ಸು । ಕಣ್ಣೀರು
ತಡೆದ ಮಳೆಯಾಗಿ ಸುರಿದಾವ ॥ ೧

ಬೀಸಿ ಹಾಡುನ ಬಾರ, ಕಾಸು ಜಿಪುಣನ ಹಾಡ-
ಗಾನ್ಯಾಕ ಬಾಳು ಜನುಮಕ । ಜಗದಾಗ
ಸೋಸಿ ನೆಡದಾರ ಸಂಸಾರ ॥ ೨

ಪುಲಿಕೇಶಿ ದೊರೆಯಾಳಿ, ಕಲಕೆಲ್ಲ ತಿಳಿಯಾಗಿ
ಬಲಕಾಣಕೇಳೊ ದೊಡಬಸವ । ಡಂಬಳದ
ಕಳನಾದ ತೇರ ಎಳೆದಾವ ॥ ೩

ಹಿಡಿ ಹೊನ್ನು ಹನಿರಗುತ, ಎಡೆಕೆರೆಗೆ ಮಲ್ಲಮ್ಮ
ದೊಡಬಸವ ಸಾವ ಕರಕೊಂಡ । ಮಗರಾಮ
ಕಡೆಗಾದ ಕೆರೆಗೆ ಆಹುತಿಯ ॥ ೪

ಕಾಸು ಕಾಸಿಗೆ ಜೀನ, ರಾಶಿ ಗಳಿಸಿದ ಹೊನ್ನು
ಆಸೆ ಉಣಲಿಲ್ಲ ಒಡಲೂಟ ದೊಡ್ಡ ಬಸವ
ವಾಸೆ ಬಡವರಿಗೆ ಡಂಬಳಕ ॥ ೫

ಗುಣವಂತಿ ಮಲ್ಲಮ್ಮ, ಹಣವಂತ ಜಿವುಣಾಗ
ಪುಣವಂತಿ ಮಡದಿ ಮನಿಯಾಗ । ದಯವಂತಿ
ತನುವಂತಿ ಡಂಬಳದ ಬಡಜನಕ ॥ ೬

ಹೊಟ್ಟೆಗಿ ಉಣಲಿಲ್ಲ, ಬಟ್ಟೆ ಮೈಗುಡಲಿಲ್ಲ
ಕಟ್ಟಿಸಾಗಿಟ್ಟೆ ಮನಿಯಾಗ । ಸಂಸಾರ
ದಿಟ್ಟೆ ಹುಟ್ಟ್ಯಾನ ಮಗರಾಯ ॥ ೭

ಮಗಹುಟ್ಟಿ ಹದಿನಾರು, ಮುಗದೊಮ್ಮೆ ಬರಬಂತು
ಸಿಗಲಿಲ್ಲ ಜನಕ ಹಿಡಿಜೋಳ । ದೊಡಬಸವ
ಹಗೆ ತುಂಬಿ ಕಣಜ ಪರಿಸಿದ ॥ ೮

ಬಂತು ಬೀಸುತ ಬರವು, ಎಂತು ಜನ ಗೋಳಾತೊ
ಕಂತು ಹರಕಾಯೊ ಜನವೆದ್ದು । ಡಂಬಳದ
ನಿಂತು ನಿಂತಲ್ಲೆ ಕೈಮುಗಿದು ॥ ೯

ಬರದಾಗ ಕೆರೆಕಡಿಸೊ, ವರಶೆಟ್ಟಿ ದೊಡಬಸವ
ಹರನಿನಗ ಮೆಚ್ಚಿ ಮರತಾನೊ । ಲಕ್ಕಸಮಿ
ನರದೀಪ ಹಚ್ಚೊ ಬಡವರಿಗೆ ॥ ೧೦

ಕೆರೆ ಬತ್ತಿ ಡಂಬಳದ, ದೊರೆ ಕೇಳಿ ಬಾದಾಮಿ
ಮರಗ್ಯಾನ ಕರುಣಿ ಪುಲಕೇಶಿ । ನಾರ್‍ಯಾನ
ತೆರಗಿ ಜನದಾಗ ಕಡತವೊ ॥ ೧೧

ಗೋಳು ಕೇಳಿದ ಅರಸ, ಕಾಳ ಸಾರಿಗೆ ಹೇರಿ
ಕಳಿಸ್ಯಾನ ಜನಕ ದೊಡ ಬಸವ । ಡಬಳದ
ಗಳಿಸ್ಯಾನ ಜನದ ರಗಲ್ಲೆಂಡಿ ॥ ೧೨

ಕೇಳಿ ಕೊರಗಿತು ಮಂದಿ, ಗೋಳಿಟ್ಟು ಬೋರಾಡಿ
ಜೋಳ ಜೋಳೆಂದು ಮನಿಮುಂದ । ನೀಗ್ಯಾರ
ನಾಳೆ ನಾಳೆಂದ ದೊಡಬಸವ ॥ ೧೩

ತಲೆಗಿಂಬಿಗ್ಹೊನ್ನಿಟ್ಟು, ಮಲಗಿ ಮಡಿಯಿತು ಮಂದಿ
ಕುಲಗೇಡಿ ಹೊನ್ನ ಕೂಡಿಸಿದ । ದೊಡಬಸವ
ತಳಮಳಿಸಿ ಮಡದಿ ಮನಿಯಾಗ ॥ ೧೪

ಸಾವಜೀವಕ ಹಾಕೊ, ತ್ಯಾವೆಂದು ಹನಿನೀರ
ಸಾವುಕಾರೆಂದು ಜನ ಬಂತು । ಪತಿದೇವ
ಕಾಯೊ ಉಣ್ಣನೀಡಿ ಕೈಮುಗಿವೆ ॥ ೧೫

ಕರಗಾಲ ಊರ್ಹೊಕ್ಕಿ, ಎರವಾತ ಮಳೆಬೆಳೆಯು
ಬರಗಾಲ ಬಂತ ಡಂಬಳಕ । ಎಲೆ ಹೆಣ್ಣ
ತರವಲ್ಲ ನಿನ್ನ ಒಡಬಾಳ॥ ೧೬

ಕುಡಿದೆನೆಂದರ ಗಂಜಿ, ಒಡಕು ಕಾಸೆನಗಿಲ್ಲ
ಬಡವರಿಗೆ ಕೊಟ್ಟು ಸಲುವಾಕ । ತವರೂರ
ಒಡವೆಲ್ಲ ನಿಮ್ಮ ತಾಬಾಕ ॥ ೧೭

ವಜ್ಜರುಂಗರ ತಾರ, ಹೆಜ್ಜಿ ಮೀರ್ಯಾವ ಮಾತ
ದರ್ಜೆನಂದ್ಹೋತ ಗಂಡಾಗಿ । ಎಲೆ ಹೆಣ್ಣ
ಲಜ್ಜೆ ನಿನಗಿಲ್ಲ ನುಡಿಲಾಕ ॥ ೧೮

ತವರೂರ ಉಂಗುರಕ, ನಿವ ಏನ ಅಧಿಕಾರ
ಶಿವಶಿವನ ತಾಯಿ ಕೊಟ್ಟಾಳ । ಉಂಗುರದ
ಬವಣಿ ಬಿಡಲಿಲ್ಲ ಕಡೆತನಕ ॥ ೧೯

ಸಾಕು ಸುಡಲೀ ಬಾಳ, ಯಾಕಮಾಡಿದಿ ಶಿವನ
ನಾಕ ಮಂದ್ಯಾಗ ಹೌದೆನಿಸಿ । ನಡೆದಾರ
ಜೀಕ ಕೈಲಾಸ ತೂಗೂದ ॥ ೨೦

ಬಟ್ಟಿಗುಂಗರವಿಡಲು, ಇಟ್ಟವರ ನುಂಗೂದ
ಕೊಟ್ಟೆ ಹಡದವ್ವ ಕಿವಿಮಾತ । ನೆಸಪಾಗಿ
ದಿಟ್ಟೆ ಮಲ್ಲಮ್ಮ ಕೈಗಿಟ್ಟ ॥ ೧೧

ಬಳಿಗೆ ಬಾ ಮಗರಾಯ, ತಿಳಿದೂತ ಕಿವಿಗಿಡುವೆ
ಮುಳಗಿದರ ಹೋತ ಈ ಜಲುಮ । ಡಂಬಳದ
ಕೆರೆ ಕಡಿಸು ಭಾರ ನಿನಮ್ಯಾಲೆ ॥ ೧೨

ಹೊತ್ತಿಗಾಗದ ಜೀವ, ಸತ್ತ ಹೆಣ ಜಗದಾಗ
ಉತ್ತಮರ ಮಾತ ನಡಿಯಾವ । ಬಡಜನಕ
ಕುತ್ತು ಬಂದಾಗ ಉಣನೀಡ ॥ ೧೩

ಮಲಗ್ಯಾಳ ಮಲ್ಲಮ್ಮ, ಬಲಗೈಯಾಗುಂಗೂರ
ಬೆಳಗಾಗಿ ಕಂಡ ದೊಡ ಬಸವ । ಇಟಗೊಂಡ
ಚಣಕ ಕರಕೊಂಡ ದುರುಮರಣ ॥ ೧೪

ಹಡದವ್ವ ಹಡದಪ್ಪ, ಎಡಬಲಕ ಮಲಗ್ಯಾರ
ಬಡಕೊಂಡು ರಾಯ ಆಹುತಿಯ । ಕೆರೆಗಾದ
ಡಂಬಳದ ಸುದ್ದಿ ಹರಿದಾವ ॥ ೧೫

ವಜ್ಜರುಂಗರ ಮುರಿಸಿ, ಜನ ಕೂಡಿ ಗುಡಿ ಕಟ್ಟಿ
ತೇರ ಎಳಿದಾರ ದೊಡಬಸವ । ಡಂಬಳದ
ಗರತಿ ಮಲ್ಲವ್ವ ತೆರಿ ಏರಿ ॥ ೧೬

ಪುಲಕೇಶಿ ದೊರೆಯಾಳಿ, ಕಲಕೆಲ್ಲ ತಿಳಿಯಾಗಿ
ಬಲಕಾಣ ಕೇಳೊ ದೊಡಬಸವ । ಡಂಬಳದ
ಕಳನಾದ ತೇರ ಎಳಿದಾವ ॥ ೧೭

## ಕಲ್ಯಾಣ ಬಸವ

ಸಾಗಿ ಸದ್ಗುರು ಯೋಗಿ ಬಂದರ ।
ಹೋಗಿ ನೋಡುಣ ಗುರು-।
ಮೋಕ್ಷವ ಬೇಡುಣ ॥ ಪ ॥

ಕಲ್ಯಾಣ ಮನಿಯಾಗ, ಎಲ್ಲ ಶರಣರ ಕಂಡೆ
ಬಲ್ಲಿದನ ಕಂಡೆ ಬಸವಣನ । ಗುರುವೆ ॥ ನಾ ॥ ಪಾದಕ
ಚೆಲ್ಯಾಡಿ ಬಂದೆ ನನ ಮನವ । ಗುರುವೆ ॥ ನಾ ॥ ೧

ಕಲ್ಯಾಣ ಪುರವಾಗ, ಎಲ್ಲರಿಗು ಕಲ್ಯಾಣ
ಕಲ್ಯಾಣ ಬಂತ ಜಗದಾಗ । ಗು । ನಾ । ಬಸವಣ್ಣ
ಕಲ್ಯಾಣ ಕಟ್ಟಿ ಹೆಸರಾದ । ಗು । ನಾ । ೨

ಬಸವ ನಿನ ಕಲ್ಯಾಣ, ದೆಸೆ ದಿಕ್ಕ ಕೇಳ್ಯಾವ
ಮುನುಕಿ ಜನ ಬಂತು ಮಂಟಪಕ । ಗು । ನಾ । ಕಲ್ಯಾಣ
ಉಸುರಾತೊ ಶಿವನೆ ಶರಣರಿಗೆ । ಗು । ನಾ । ೩

ಶರಣರನ ನೆನದಾರ, ನರಗೀಯು ಇಟ್ಟ್ಯಂಗ
ಅರಳ ಮಲ್ಲೀಗಿ ಮುಡದ್ಹಂಗ । ಗು । ನಾ । ಕಲ್ಯಾಣ
ಶರಣರನ ನೆನೆಯೊ ಎಲೆ ಮನವ । ಗು । ಸಾ । ೪

ಅರಿಕೆ ಶರಣರ ನಾಮ, ಕುರುಹು ಕಲ್ಯಾಣಾತೊ
ಹೊರ ಒಳಗು ಬಿತ್ತು ಶಿವ ಬೆಳಕು । ಗು । ನಾ । ತೊಳಬೆಳಗಿ
ನರಲೋಕವಾತ ಹರಲೋಕ । ಗು । ನಾ । ೫

ಎಲ್ಲ ದಿಕ್ಕಿನಗಾಳಿ, ನಿಲ್ಲದಲೆ ಬೀಸ್ಯಾವ
ಕಲ್ಯಾಣ ಗಾಳಿ ಬಲುಬೀಸಿ । ಗು । ನಾ । ನಾಡಾಗ
ಎಲ್ಲಾರೊಕ್ಕ್ಯಾರ ಶಿವನುಡಿಯು । ಗು । ನಾ । ೬

ಒಳಗಿರುವ ಕಲ್ಯಾಣ, ಇಳೆಯು ಬೆಳಗುವ ಬೆಳಕು
ಹೊಳೆಯಾಗಿ ಹರಿದು ತಿಳಿ ಬಂತು । ಗು । ಸಾ । ಹೊಸಮತಕ
ಬೆಳಸು ಹುಲಸಾತ ಜಗದಾಗ । ಗು । ಸಾ । ೭

ಹೂವಾಗಿ ಅರಳ್ಯಾರ, ಆವಾಗಿ ಕರೆದಾರ
ನೇವರಿಗೆ ಮಿಗಿಲ ಕಲ್ಯಾಣ । ಗು । ಸಾ । ಶರಣರಿಗೆ
ಯಾವ ಬಗೆಯಿಂದ ನೆನೆಬೇಕ । ಗು । ಸಾ । ೮

ಬಾರೊ ಬಲ್ಲಿದ ಬಸವ, ತೋರೊ ಅಲ್ಲಮದೇವ
ಸಾರೊ ನೀ ಚೆನ್ನಬಸವಣ್ಣ । ಗು । ಸಾ । ಕಲ್ಯಾಣ
ಧೀರ ಮಡಿವಾಳ ನೀ ಕಾಯೊ । ಗು । ಸಾ ।

ಸತ್ಯಸಾಗರವಾಗ, ನಿತ್ಯ ಮಂದಿರವೇನ
ಗೊತ್ತುಳ್ಳ ಹಾದಿ ಶಿವಭಕ್ತಿ । ಗು । ಸಾ । ಕಲ್ಯಾಣ
ಎತ್ತ ನೋಡಿದರ ಕೈಲಾಸ । ಗು । ಸಾ । ೧೦

ಅಂಗಳದ ಮಂಟಪಕ, ಲಿಂಗ ಬೆಳದಿಂಗಳದ
ಜಂಗ ನುಡಿಸಿದರ ಕಲ್ಯಾಣ । ಗು । ಸಾ । ಜಂಗಮರ
ಸಂಗ ಶಿವಬೆಳಕ ನಿಜಪದಕ । ಗು । ಸಾ । ೧೧

ಕಲ್ಯಾಣ ಬಯಲಾಗ, ಎಲ್ಲ ಶರಣರು ಕೂಡಿ
ಬಲ್ಲವರು ಮಾತ ಹೇಳ್ಯಾರ । ಗು । ಸಾ । ಜನದಾಗ
ಹೊಲೆಂಬು ಸಬುದ ಮಾಯಾತ । ಗು । ಸಾ । ೧೨

ಮಾತು ಕುಲಹೊಲೆಯಲ್ಲ, ಜಾತಿ ಸೂತಕವಲ್ಲ
ನೀತಿ ನೀರ್ಬೆಳಕಿ ಕಲ್ಯಾಣ । ಗು । ಸಾ । ಮಹಮನೆಗೆ
ದಾತ ಬಸವಣ್ಣ ಶಿವಭಕ್ತ । ಗು । ಸಾ । ೧೩

ಶಿವಭಕ್ತಿ ಹೂ ಅರಳಿ, ಶಿವಭಕ್ತ ಬಸವಣ್ಣ
ಶಿವಜ್ಞಾನ ತೊರೆಯು ಚೆನಬಸವ ಗು । ಸಾ । ಪ್ರಭುದೇವ
ಶಿವಗಣ್ಣ ಲೋಕ ನೋಡುದಕೆ । ಗು । ಸಾ । ೧೪

ಈಸಿ ದಾಟುನ ಬಾರ, ಖಾನ ಶರಣರ ಹಾಡಿ
ಬೀಸಿ ಹಾಡೂನ ಕಲ್ಯಾಣ । ಗು । ನಾ । ಶರಣರಿಗೆ
ಹಾಸಿ ಈ ಮನವ ಸವಿಯಾಲೆ । ಗು । ನಾ । ೧೫

ಓಂ ಶಿವನೆ ಬಸವಣ್ಣ, ಓಂ ಶಿವನೆ ಪ್ರಭುದೇವ
ಓಂ ಶಿವನ ಶಕ್ತಿ ಚನಬಸವ । ಗು । ನಾ । ಕಲ್ಯಾಣ
ಓಂ ಶಿವನೆ ಶರಣು ಶರಣರಿಗೆ । ಗು । ನಾ । ೧೬

## ಪ್ರಪಂಚ ದರ್ಶನ

ಗೆಳತೀ ಹನಿಗೂಡಿದರ್ಹಳ್ಳ ॥ ಪ ॥
ಹನಿಹನಿ ಗೂಡಿದರ್ಹಳ್ಳ, ತೆನಿತೆನಿ ಗೂಡಿದರ ರಾಸಿ
ಮನಕ ಮನಗೂಡಿದರ, ಮನಿಮಾರ ಗೆಳತಿ ॥ ಅ. ಪ. ॥

* ಹರಿಯು ಹೊತ್ತಿಲೆದ್ದು, ಅತ್ತಿಮಾವಗ ಶರಣ
ಮತ್ತೊಂದು ಶರಣ ಗುರುವೀಗೆ । ಗೆ । ನಾಮಾಡಿ
ಹೊಕ್ಕೇನಿ ಮನಿಯು ದಗದಕ । ಗೆ । ೧

ಕಲ್ಲೀಗಿ ಮುಕ್ಹಾಕಿ, ಬಲ್ಲಿದರ ನೆನದೇವ
ನೊಲ್ಲ ಕೇಳಾಕ ಶಿವ ಬಂದ । ಗೆ । ಮ್ಯಾಗಿರುವ
ಮುಕ್ಕಣ್ಣ ಮನಸ ನೋಡಾಕ । ಗೆ । ೨

ಸಂಸಾರವೆಂಬೂದು, ಸಾಗರ ಹೊಳೆಯವ್ವ
ಈಸ ಬಲ್ಲವಗ ಎದೆಯುದ್ದ । ಗೆ । ಗಿಳಿರಾಮ
ಓದಬಲ್ಲವಗ ಕೈಲಾಸ । ಗೆ । ೩

* ಹರಿಯಾಗ ಏಳುತಲಿ ಹರಧ್ಯಾನ ಗುರುಧ್ಯಾನ
ಅಂಬಲಿದಾನ ಶಿವದಾನ । ಗೆಳತಿ । ಗುರುಕೊಟ
ಲಿಂಗದ ಧ್ಯಾನ ಹಗಲಿರುಳು । ಗೆಳತಿ ।

ಸತಿಪತಿ ಇದ್ದರ, ಹಿತವಂತರಿರಬೇಕ
ಕುಂಬಾರ್ಬು ಳದಂಗ ಸಂಸಾರ। ಗೆ। ಸಾಗಿದರ
ಮುಂದೈತಿ ತಂಗಿ ಕೈಲಾಸ। ಗೆ। ೪

ಹೆಣ್ಣೀನ ಈ ಜಲುಮ, ಸಣ್ಣ ಮಾಡಲಿಬೇಕ
ಸುಣ್ಬರಳ ಮಾಡಿ ಸುಡಬೇಕ। ಗೆ। ಈ ಜನುಮ
ಮಣ್ಮಾಡಿ ಮುಕ್ತಿ ಗೆದಿಬೇಕ। ಗೆ। ೫

ಸಂಸಾರ ದಂದುಗ, ಹಿಂಗವೊ ಶಿವರಾಯ
ಹಿಂಗುದಕ ಹಾವಿ ಶರಣರದ। ಗೆ। ತಿಳಕೊಂಡು
ಗೆದಿಬೇಕ ಇದ್ದು ಸಂಸಾರ। ಗೆ। ೬

# ಇತರ ಹಾಡುಗಳು

*** ಹೊರವುಚುಕ:—**

ಪ್ರಪಂಚದ ಅರಿಕೆಯುಳ್ಳ ಹಳ್ಳಿಗನಿಗೆ ಮೈತುಂಬ ಕಣ್ಣು. ಅವನ ಕಣ್ಣೋಟ ಯುಗಯುಗಾಂತರಕ್ಕೆ ಹರಿಯಬಲ್ಲುದು. ಕಾಲ ಚಕ್ರದಲ್ಲಿ ಚಂದ್ರಗುತ್ತಿಯ ಅರಸನು ಮಗಳ ಮೋಹಿಸಿದ ಐತಿಹಾಸಿಕ ಕಥೆಯನ್ನು ಧರ್ಮ ನೀತಿ ಬೆಳೆಯಲೆಂದು ಅವನು ಜನತೆಗೆ ಹಾಡಿದ್ದಾನೆ. ''ಗರತಿ ಗಂಗವ್ವ'' ನಾಣ್ಣುಡಿಯು ಕನ್ನಡ ಗರತೆಯರ ಪಾತಿವ್ರತ್ಯ ಪುಷ್ಪ ಪರಿಮಳದ ಮಧುರ ಪಿಣಾವಾಣಿ, ರಸಿಕನಾದ ಅವನು ಹೆಣ್ಣಿನ ಹೆಣ್ಣುತನದ ಮಹತೆಯನ್ನು ಮೀನಲ ನೋಬಾನವಾಡಿದ್ದಾನೆ. ಶಿವಶರಣರ ಸತ್ಯಸಂಕಲ್ಪವು ಅವನಿಗೆ ಕೈಲಾಸ ನಾದ ವಾದ್ಯ. ಶರಣರಿಂದ ಕಸಬಿನ ಬೀಜಮಂತ್ರವನ್ನರಿತ ಅವನು ಕಸಬುಗಾರರನ್ನು ಕೊಂಡಾಡಿದ್ದು ಕಲೆಯ ಗುಂಗಾನ! ಕನ್ನಡ ಮಕ್ಕಳು ನಹ, ''ಮಕ್ಕಳಾಟ ಪ್ರಪಂಚದನುಕರಣ,'' ವೆಂಬುದನ್ನು ಗುಜಗುಜ ಮಾನುರಿಯಲ್ಲಿ ಹಾಡಿಯಾಡಿದ್ದಾರೆ.

---

* ಹೊರವುಚುಕವು ಹಳ್ಳಿಗರ ನುಡಿಯಲ್ಲಿ 'ಅಂತರ್ದರ್ಶನ'; ಕೇವಲ ಸ್ಪರ್ಶದಿಂದ ಒಳಮೈ ತೋರಿಸುವ ಒಂದು ಗಿಡಮೂಲಿಕೆ.

# ಚಂದ್ರಗುತ್ತಿ ಅರಸ

ತೂಗ ತೂಗನ್ನಿರಿ। ತೂಗಿರಿ ಮನವ ವಿಚಾಣದಲಿ ॥ ಪ ॥

ಚಂದುಗುತ್ತೀ ಅರಸ। ಅವ ತನ್ನ ಮಗಳ ಮ್ಯಾಗಿನ ಮನಸ
ದೇವ ದರುಮದ ಮಾತ। ಹಿರಿಯರೆ ಕೂತು ಕೇಳರಿ ನೀವು
॥ ತೂ ॥ ಅ. ಪ. ॥

ತೊಟ್ಟ ಕುಬುಸವ ಕಳಿದು। ಹಾಕ್ಯಾಳ ಬಾಲಿ ಬಾಗಿಲದಿವರು
ತಂದಿ ಕಚೇರಿಲಿ ಬಂದ। ಕುಬುಸದ ರಂಗ ಏನ ಚಂದ
ಕುಬಸ ಯಾರದಂದ। ಮಗದಿನ ಕೇಳತಾನ ಬಂದ ॥ ತೂ ॥ ೧

ಮುತ್ತ್ತೋದಿ ನನ ಮಗಳ। ಮುತ್ತಿನ ಅಟಕೋಲ
ಬಚ್ಚಲೇರುತ ಬಾಲಿ। ನಿಂತ ಕೇಳ್ಯಾಳ ಮಾತ ॥ ತೂ ॥ ೨

ನುಬಕ ನೂಪರಣಿ। ನಿನ ಮುಕವ ಬಂಗಾರ ವರಣಿ
ಕೇಳಿಲೆ ಪತಿವರತಿ। ನಿನ ಬಿಡುವಿಲ ಬಾಗಿರಸಥಿ ॥ ತೂ ॥ ೩

ನಷ್ಟ ಕರುಮದ ಅರಸ। ಅಕಿ ನಿನ್ನೊಟ್ಟೆಲ್ಹುಟ್ಟಿದ ಮಗಳ
ಕರುಮದ ಮಾತೀವು। ನಿನ ದರುಮವಾವಲ್ಲಿ ಬಿಟ್ಟಿ ॥ ತೂ ॥ ೪

ಪರವುತ ಮಲ್ಲಯ್ಯ। ಅಕಿ ಭಾವಕೊಲಿದನಲ್ಲ
ಬಚ್ಚಲ ಮೋರ್‍ಯಾಗ। ಬಾಲಿನ ಪಾರ ಮಾಡಿ ಬಿಟ್ಟ ॥ ತೂ ॥ ೫

ಗಿರಿಯ ನೇರ್‍ಯಾಳ ಬಾಲಿ। ತಿರುಗಿ ನೋಡ್ಯಾಳ ಹೊರಳಿ
ನಷ್ಟ ಕರುಮದ ತಂದಿ। ನನ್ನ ಬೆನ್ನ ಹತ್ತಿ ಬಂದಿ ॥ ತೂ ॥ ೬

ಬೋರವ್ವ ನಮ ತಂಗಿ। ಇವನ ಬೆನ್ನಿಲಿ ಬರಿಯುವ್ವ
ತುಂಬಿದ ಬಾಗಿಣವ। ತಂದು ಚ್ಯಾಜವ ಕೊಡುವೆ ॥ ತೂ ॥ ೭

ಶಿವಗುತ್ತಿ ನೀ ಅರಸ। ನಾ ಕೊಡುವೆ ನಿನಗ ನರಾವ
ಪಾತಳ ಗಂಗ್ಯಾಗ। ನೀ ಕಲ್ಲಿನ ಸಿಲೆಯಾಗೊ

ಕಂಚಿನ ಕೋಳ್ಯಾಗೊ । ಹಗಲು ರಾತುರಿ ಕೂಗೊ ॥ ತೂ ॥ ೮

ಚಂದ್ರಗುತ್ತಿ ಅರಸ । ಹಿಡಿ ಕೊಡುವೆ ನಾ ಸರಾವ ೯
ಪಾತಳ ಗಂಗ್ಯಾಗ । ನೀ ಕಲ್ಲಿನ ಸಿಲೆಯಾಗೊ
ಕಂಚಿನ ಕೋಳ್ಯಾಗೊ । ನೀ ಹಗಲು ರಾತುರಿ ಕೂಗೊ ॥ತೂ॥ ೧೦

## ಗರತಿ ಗಂಗವ್ವ

ಸೋಬಾನವ ॥ ಪ ॥

ಅಂಗೈಯಟ ಮುಗಲಾಗ ಲಿಂಗದಟ ಮಾಡಾಗಿ
ಜಂಗಿ ಮಳೆರಾಯ ಸುರದಾನ । ಸೋ । ಭೂತಾಯಿ
ತೊಯ್ದು ಹೊತ್ತಾಳ ಜಲಬಿಂದು ॥ ಸೋ ॥ ೧

ಮಲ್ಲಾಡಕ ಮಳೆಯಾಗಿ ಒಡ್ಡೊಡೆದು ಹಳ್ಳರಿದು
ನಮ್ಮೂರ ಮುಂದ ಹೊರಸೂಸಿ । ಸೋ । ಮಲಪಾರಿ
ಹೊರಚೆಲ್ಲಿ ಊರ ಹೊಕ್ಕಾಳ ॥ ಸೋ ॥ ೨

ಗಂಗ್ಯಳದ ಗರತಿಗೆ ಏಳು ಕೊಪ್ಪರಿಗ್ಹೊನ್ನ
ಆನಿ ಅಂಬಾರಿ ವಾಲಗ । ಸೋ । ದಾರೂತಿ
ಊರ ಓಣ್ಯಾಗ ಸಡಗರ ॥ ಸೋ ॥ ೩

ಊರ ಹಿರಿಯರ ಕೂಡ ಗೌಡ ಸಾರುತ ಬಂದ
ಗರತಿಯಿದ್ದಾಕಿ ಹೊರಬೀಳ । ಸೋ । ಹಡದವ್ವ
ಹೊಳೆಯುಳಿದು ಊರ ಉಳಿಸೆಂದ ॥ ಸೋ ॥ ೪

ಓಣಿ ಓಣಿಯ ತಿರುಗಿ ಊರ ಅಗಸಿಗೆ ಬಂದ
ಅಗಸಿ ಮುಂದಾಡು ಬಾಲಯ್ಯ । ಸೋ । ತಾ ಕೇಳಿ
ಗರತಿ ನಮ್ಮವ್ವ ಮನೆಯಾಗೊ ॥ ಸೋ ॥ ೫

ಓಡುತೋಡುತ ಬಾಲ ನಡುಮನೆಗೆ ಬಂದಾನ
ಹಡದವ್ವ ಗರತಿ ಜನಬಂದ । ಸೋ । ಕರೆದಾರ
ಗರತಿ ಗಂಗವ್ವ ಹೊರಬೀಳ ॥ ಸೋ ॥ ೬

ನಮ್ಮೂರ ಹೊಳಿ ಬಂದು ಊರ ಹೊಕ್ಕಳ ತಾಯಿ
ಗರತಿ ಗಂಗವ್ವ ಹೊಳಿ ಅಳಿಯು । ಸೋ । ನಮ್ಮೂರ
ಮುತ್ತ್ಯೇದಿ ಕಳಸ ಹೊರಬೀಳ ॥ ಸೋ ॥ ೭

ಅಡಗೀಯು ಮನಿಯಾಗ ಗರತಿ ಬಡವನ ಮಡದಿ
ಅರತೀಲಿ ಕೇಳ ಒಡನುಡಿಯು । ಸೋ । ಹಡದವ್ವ
ಬಾಗೀಣ ಹೊತ್ತು ಹೊರಟಾಳ ॥ ಸೋ ॥ ೮

ರಂಗ ಪಡಸಾಲ್ಯಾಗ ದಿಂಬದ್ಹಾಸಿಗಿಮ್ಯಾಲೆ
ಇಂಬಿಲೊರಗೀರು ಮಾವಯ್ಯ । ಸೋ । ನಿಮ ಸೊಸಿ
ಗಂಗಿಯುಳಿಯಾಕ ಹರಸಯ್ಯ ॥ ಸೋ ॥ ೯

ಪಗಡಿ ಪಡಸಾಲ್ಯಾಗ ದಗದ ಮಾಡಿಸುವತ್ತಿ
ಮಕ್ಕಳಿಬ್ಬಾರ ಬಲು ಜೋಕೆ । ಸೋ । ಹಡದವ್ವ
ಗಂಗಿಯುಳಿಯಾಕ ಹರಸವ್ವ ॥ ಸೋ ॥ ೧೦

ನಡುಮನೆಯು ನಡುಗೀಲ ಒಳಗಿರುವ ನಾದುನಿಯೆ
ಕುಲವಂತಿ ಜೋಕೆ ಒಗತಾನ । ಸೋ । ಗೌರವ್ವ
ಗಂಗಿಯುಳಿಯಾಕ ಹರಸವ್ವ ॥ ಸೋ ॥ ೧೧

ಎಡಮನೆಯ ಬಾಗಿಲದ ಒಡತಿ ನೀ ನೇಗೆಣ್ಣಿ
ಬಡಿವಾರ ಬ್ಯಾಡ ಮನೆ ಜೋಕೆ । ಸೋ । ಹಡದವ್ವ
ಗಂಗಿಯುಳಿಯಾಕ ಹರಸವ್ವ ॥ ಸೋ ॥ ೧೨

ಭಾವ ಮೈದುನರಯ್ಯ ನಡು ಹೊಲದ ರೈತಾರ
ಬಿಡುದಿನ ಬ್ಯಾಡ ದರುಮಕ । ಸೋ । ಮನಿಸೊಸಿಗೆ
ಗಂಗಿಯುಳಿಯಾಕ ಹರಸರಿ ॥ ಸೋ ॥ ೧೩

ಕಡಗೋಲ ಕಂಬದ ನಡುಮನಿಯ ಪಡಿಯಾಗ
ಪಡಿಹೊನ್ನು ಉಂಟು ಎನ್ನರಸ । ಸೋ । ನಾ ಮರಳಿ
ಬರದಿರಕ ನಿಮಗ ಬಾಸಿಂಗ ॥ ಸೋ ॥ ೧೪

ಚಂದ್ರ ಪಡಸಾಲ್ಯಾಗ ಚಂದ್ರ ಮಂಚದ ಮ್ಯಾಲೆ
ಚಂದ್ರ ನನ ದೊರೆಯು ನನ ಮಾತ । ಸೋ । ನಡೆಸರಿ
ಗಂಗಿಯುಳಿಯಾಕ ಹರಸರಿ ॥ ಸೋ ॥ ೧೫

ಅತ್ತಿ ಮಾವಗ ಶರಣು ಭಾವ ಮೈದುನ ಶರಣು
ಸುತ್ತಿರುವ ಬಳಗ ನನ ಶರಣು । ಸೋ । ನಮ್ಮೂರ
ಗಂಗಿಯುಳಿಯಾಕ ಹರಸರಿ ॥ ಸೋ ॥ ೧೬

ಲಿಂಗವಂತರ ಗೆಳತಿ ಶಿವಶರಣೆ ನಾಗಮ್ಮ
ಲಿಂಗದ ಬೆಳಕ ನೀನೀಡ । ಸೋ । ಹಡದವ್ವ
ಗಂಗಿಯುಳಿಯಾಕ ಹರಸವ್ವ ॥ ಸೋ ॥ ೧೭

ಹಾದೀಯ ಗೆಳತೇರ ಬೀದಿಯ ಕೆಳದೇರ
ಜಾದಮಲ್ಲೀಗೆ ಮುಡಿಯಾವ । ಸೋ । ಐದೇರ
ಗಂಗಿಯುಳಿಯಾಕ ಹರಸರಿ ॥ ಸೋ ॥ ೧೮

ಭೂತನಾಥಗ ಶರಣು ಪಂಚಲಿಂಗಗ ಶರಣು
ದೈವ ದೇವರಿಗೆ ನನ ಶರಣು । ಸೋ । ನಮ್ಮೂರ
ಗಂಗಿಯುಳಿಯಾಕ ಹರಸರಿ ॥ ಸೋ ॥ ೧೯

ಊರ ದೈವದ ಕೂಡ ಊರ ಗೌಡನ ಕೂಡ
ಗರತಿ ಗಂಗವ್ವ ನಡೆದಾಳ । ಸೋ । ಹೊಳೆದಂಡೆ
ಮಲಪಾರಿ ಚೆಲ್ಲಿ ಹರಿಯೂಳ ॥ ಸೋ ॥ ೨೦

ಹೊಳೆ ತಾಯಿ ಗಂಗವ್ವ ಕಿರಿಯಾಗಿ ಹರಿಯವ್ವ
ಮುತ್ತೋದಿ ಬಾಗೀಣ ನಿನಗೀವೆ । ಸೋ । ಮಲಪಾರಿ
ನನ್ನೂರ ಸಲುಹ ಸಿರಿಯಾಳ ॥ ಸೋ ॥ ೨೧

ಕೆಂಚಿ ಮೈನೆರೆದಾಳ ಕೆಂಚೆಗೇನೊಯ್ಯಾಲೆ
ಮಂಚಕ್ಕಾನಾಕ ನ್ಯಾಸಕ್ಕಿ ॥ ಸೋ ॥ ೭

ಮಿತ್ರಿ ಮೈನೆರೆದಾಳ ಮಿತ್ರೆಗೇನೊಯ್ಯಾಲೆ
ಸೂತರದ ಗೊಂಬಿ ಎಡಬಲಕ ॥ ಸೋ ॥ ೮

## ದಾಸಿಮಯ್ಯ

ದಾಸ್ಮಯ್ಯ ನೇದ ದೇವಂಗದ್ವಸ್ತರವ ॥ ಪ ॥

ಜಗದೀಶ ಸಂಗಯ್ಯ ತಾ ಬೇಡಬಂದ
ದಾಸ್ಮಯ್ಯ ನೇದ ದೇವಂಗದ್ವಸ್ತರವ ಅ. ಪ. ॥

ಹರಬ್ರಹ್ಮಕೃಷ್ಣಯ್ಯ ವುಂಕೀಯ ಹೂಡಿ
ಹದಿನಾರು ಗಾವೂದ ಎಳೆಗಳ ಕೆಚ್ಚಿ
ಲಾಕೇಶನಂಬು ಲಾಳೀಯ ತಿರುವಿ
ಭೂಮಿತೂಕದೊಂದ್ವಸ್ತ್ರ ನೇದ ೧

ದಂಡಕೋಲುಗಳ ಜೋಳಿಗಿ ನೇತು
ದುಂಡುಗರ ಪುತ್ರಿ ಸೂಲವ ನೇದು
ಆರೊಂದು ನಿಂಬೀಯ ನೂರೊಂದು ವರಿಯಾಗಿ
ತಂಡಕ ತಂಡಕ ಶಿವನೋಲಗ ನೇದ ೨

ಅಡ್ಡ್ಣಗಿ ಹರಿವಾಣ ಗಿಡ್ಡ ಮಜ್ಜುರಿ ಸರ
ಏಕಂತ್ರ ಪಂಚಾರುತಿ ಕಡ್ಡೀಯ ಬತ್ತಿ
ಸಾಕ್ಷೇತ ನುಡಿವ ಶರಣರ ನೇದ
ಮಂದಿರಕ ಬರುವಂತ ಮಂದೀಯ ನೇದ ೩

ಊರ ಊರ ಸೇದ ಊರ ಗೌಡನ ಸೇದ
ಊರ ಮಧ್ಯದ ಶಿವಲಿಂಗವ ಸೇದ
ತನ್ನಯ್ಯನ ಸೇದ ತಮ್ಮಣ್ಣನ ಸೇದ
ಕಣ್ಣಿಗಿ ಕಂಡ ಚೆನ್ನಬಸವನ ಸೇದ ೪

ಆರು ಮೂರುದ್ದ ಕೊರಿಗಳ ಕೋದು
ಗಟ್ಟೀಸಿ ಗಮ್ಮನೆ ಗಳಗೀಯ ಮಾಡಿ
ಸಂಗಮೇಶೂರ ವ್ಯಾಟೀಗೆ ಒಯ್ದು
ಕೊಂಬುವರು ಶರಣಂಬುವರಯ್ಯ ೫

## ಬಡಿಗ

ಕೋಲನಾಡ ಮನನಿ ಕೋಲನಾಡ ॥ ಪ ॥

ಹರ್‍ಯಾಗೇಳುತಲೆದ್ದನ ಬಡಿಗ್ಯಾ
ಹಾಲುಬಾನಗಳುಂಡಾನ ಬಡಿಗ್ಯಾ ॥ ಕೋ ॥ ೧

ಹಾಲುಬಾನಗಳುಂಡಾನ ಬಡಿಗ್ಯಾ
ಏಳುಸುತ್ತ ಗುಡ್ಡ ತಿರುಗ್ಯಾನ ಬಡಿಗ್ಯಾ ॥ ಕೋ ॥ ೨

ಏಳುಸುತ್ತ ಗುಡ್ಡ ತಿರುಗ್ಯಾನ ಬಡಿಗ್ಯಾ
ಉಳಿ ಬಾಚಿ ಹೊತ್ತಂದನ ಬಡಿಗ್ಯಾ ॥ ಕೋ ॥ ೩

ಉಳಿ ಬಾಚಿ ಹೊತ್ತಂದನ ಬಡಿಗ್ಯಾ
ಅತ್ತಿಮರವೊಂದ್ದುಡಿಕ್ಯಾನ ಬಡಿಗ್ಯಾ ॥ ಕೋ ॥ ೪

ಅತ್ತಿಮರವೊಂದ್ದುಡಿಕ್ಯಾನ ಬಡಿಗ್ಯಾ
ಬಡ್ಡಿ ಕೊರೆದು ಬಸವಣ್ಣನ ಮಾಡಿದ ॥ ಕೋ ॥ ೫

ಬಡ್ಡಿ ಕೊರೆದು ಬಸವಣ್ಣನ ಮಾಡಿದ
ನಡವ ಕೊಯ್ದು ನಾಗಮ್ಮನ ಮಾಡಿದ ॥ ಕೋ ॥ ೬

ನಡುವ ಕೊಯ್ದು ನಾಗಮ್ಮನ ಮಾಡಿದ
ಹೂವ ಕೊಯ್ದು ಹುಲಿಗೆಮ್ಮನ ಮಾಡಿದ ॥ ಕೋ ॥ ೭

ಹೂವ ಕೊಯ್ದು ಹುಲಿಗೆಮ್ಮನ ಮಾಡಿದ
ಕಾಯ ಕೊಯ್ದು ಕಾಳಮ್ಮನ ಮಾಡಿದ ॥ ಕೋ ॥ ೮

ಕಾಯ ಕೊಯ್ದು ಕಾಳಮ್ಮನ ಮಾಡಿದ
ಎಲಿಯ ಕೊಯ್ದು ಎಲ್ಲಮ್ಮನ ಮಾಡಿದ ॥ ಕೋ ॥ ೯

ಎಲಿಯ ಕೊಯ್ದು ಎಲ್ಲಮ್ಮನ ಮಾಡಿದ
ಬೇರು ಕೊಯ್ದು ಬಿರಿಮಲ್ಲನ ಮಾಡಿದ ॥ ಕೋ ॥ ೧೦

ಬೇರು ಕೊಯ್ದು ಬಿರಿಮಲ್ಲನ ಮಾಡಿದ
ಕೊಂಬಿ ಕೊಯ್ದು ಮೂರು ಜಕ್ರವ ಮಾಡಿದ ॥ ಕೋ ॥ ೧೧

ಕೊಂಬಿ ಕೊಯ್ದು ಮೂರು ಜಕ್ರವ ಮಾಡಿದ
ಟೊಂಗಿ ಕೊಯ್ದು ಮಾತಂಗಿಯ ಮಾಡಿದ ॥ ಕೋ ॥ ೧೨

ಟೊಂಗಿ ಕೊಯ್ದು ಮಾತಂಗಿಯ ಮಾಡಿದ
ತುದಿಯ ಕೊಯ್ದು ಮಾದೇವನ ಮಾಡಿದ ॥ ಕೋ ॥ ೧೩

ತುದಿಯ ಕೊಯ್ದು ಮಾದೇವನ ಮಾಡಿದ
ಬಲಕ ಜಡಿಯ [illegible]ಮ್ಮನ ಮಾಡಿದ ॥ ಕೋ ॥ ೧೪

# ವಡ್ಡಯ್ಯ

ಕೋಲುಕೋಲನ್ನಿರೆ ।
ವಡ್ಡಯ್ಯ ಕೈಗಲ್ಲ ಕಲೆಯನ್ನಿರೆ ॥ ಪ ॥

ಬಮ್ಮ ತನ್ನ ಹಿರಿಮಗ ವಡ್ಡಯ್ಗೆ
ಕಲ್ಕೆಲಸ ಕಲಿಸಿ ಭೂಮಿಗೆ ಕಳುಹಿದ ॥ ಕೋ ॥ ೧

ಗುಡ್ಡದ ಬಿರಿಗಲ್ಲ ಹುಡ ಹುಡುಕುತ ಬಂದ
ಧರೆಗೆ ಶಿವಲಿಂಗ ಪೂಜೆಗೆ ಕೊರೆದ ॥ ಕೋ ॥ ೨

ತಂದೆ ಮಾತ ತಾ ಎದೆಯಲಿ ಇಟ್ಟು
ಮೊದಲು ಕೊರೆದ ಜ್ಯೋತಿರಲಿಂಗ ॥ ಕೋ ॥ ೩

ಲಿಂಗ ಮಂಟಪ ಲಿ[illegible]ಯುನೆಂದು
ಪಾದಗಟ್ಟೆ ಬಸವನ ಕೊರೆದ ॥ಕೋ ॥ ೪

ಉಳಿ ಚಾಣ ಸುತ್ತಿಗೆಯನೆತ್ತಿ
ಕಟೆದು ಇಟ್ಟ ಹಂಪೆಯಲಿಂಗ ॥ ಕೋ ॥ ೫

ಕಲ್ಲುತೇರ ಕಮಲದ ಗುಡಿಯ
ಬಿಲ್ಲುಬಾಣ ರಾಮರ ಗುಡಿಯು ॥ ಕೋ ॥ ೬

ಹಾವಿನ್ಹಾಸಿಗೆ ಹರಿಯನು ಕೊರೆದ
ನಾಭಿ ಕಮಲದ ಬ್ರಹ್ಮನ ಕೆತ್ತಿದ ॥ ಕೋ ॥ ೭

ಲೋಕ ಹುಟ್ಟಿಸಿ ಅಳಿವ ಮಾಡುವ
ಮೂರುಗಣ್ಣ ಮುಕ್ಕಣ್ಣನ ಕೊರೆದ ॥ ಕೋ ॥ ೮

ನುಣ್ಣಗೆ ಕೊರೆದ ಹೆಣ್ಣಿನ ರೂಪ
ಹೇಳಲುಬಾರದು ನೋಡಲುಬೇಕು ॥ ಕೋ ॥ ೯

ಮೋಣಬಸ್ತಿ ಮಿಗಿಲಾಗಿ ಕೊರೆದ
ಜಕ್ಕಣ ಗುಡಿಯ ಸುತ್ತಲು ಕಟ್ಟಿದ ॥ ಕೋ ॥ ೧೦

ಕಲ್ಲಕೋಳಿಗೆ ಚನಬಸವನ ಘೂಳಿ
ಕೋಳಿ ಕೂಗಿತು ಕಲಿಯುಗ ಮುಗಿಯಿತು ॥ ಕೋ ॥ ೧೧

## ಕುಸಬಿ ಒಡೆಯುವದು

ಕೋಲುಕೋಲನ್ನಿರೇ ॥ ಪ ॥

ಹಸನುಳ್ಳ ಬಾಲೆಂತ ಹಂತೇಲಿ ಹೋದರ ಕೋಲುಕೋಲನ್ನಿರೇ ।
ಕೊಸರಿ ಕೊಸರಿ ಎನ್ನ ಕೈ ಮೈ ಹರಿದಾಳ ಕೋಲುಕೋಲನ್ನಿರೇ ೧

ಕೊಸರಿ ಕೊಸರಿ ಎನ್ನ ಕೈ ಮೈ ಹರಿದಾಳ ಕೋಲುಕೋಲನ್ನಿರೇ
ರನ್ನದ ಕುಡಗೋಲಿಲೆ ಕುತ್ತಿಗೆ ಕೊಯ್ದಾರ ಕೋಲುಕೋಲನ್ನಿರೆ ೨

ರನ್ನದ ಕುಡಗೋಲಿಲೆ ಕುತ್ತಿಗೆ ಕೊಯ್ದಾರ ಕೋಲುಕೋಲನ್ನಿರೇ
ಎರಿ ಹೆಂಟೆಯೆತ್ತಿ ಎದಿಮ್ಯಾಗ್ಹೇರ್ಯಾರ ಕೋಲುಕೋಲನ್ನಿರೆ ೩

ಎರಿ ಹೆಂಟೆಯೆತ್ತಿ ಎದಿಮ್ಯಾಗ್ಹೇರ್ಯಾರ ಕೋಲುಕೋಲನ್ನಿರೇ
ಹಾದೀಗೆ ತಂದು ಹರಿವ್ಯಾರವಳನ್ನ ಕೋಲುಕೋಲನ್ನಿರೆ ೪

ಹಾದೀಗೆ ತಂದು ಹರಿವ್ಯಾರವಳನ್ನ ಕೋಲುಕೋಲನ್ನಿರೇ
ಗಿಲಕೀಯ ಬಡಗೀಲೆ ನೆಲುಕೂಸಿ ಬಡಿದಾರ ಕೊಲುಕೋಲನ್ನಿರೆ ೫

ಗಿಲಕೀಯ ಬಡಿಗೀಲೆ ನೆಲುಕೂಸಿ ಬಡಿದಾರ ಕೋಲುಕೋಲನ್ನಿರೇ
ಗಾಳೀಗೆ ತೂರಿ ರಾಶೀಯ ಮಾಡ್ಯಾರ ಕೋಲುಕೋಲನ್ನಿರೆ ೬

ಗಾಳೀಗೆ ತೂರಿ ರಾಶೀಯ ಮಾಡ್ಯಾರ ಕೋಲುಕೋಲನ್ನಿರೇ
ರನ್ನದ ಗೋಣ್ಯಾಗ ತುಂಬ್ಯಾರವಳನ್ನ ಕೋಲುಕೋಲನ್ನಿರೆ ೭

ರನ್ನದ ಗೋಣ್ಯಾಗ ತುಂಬ್ಯಾರವಳನ್ನ ಕೋಲುಕೋಲನ್ನಿರೇ
ಚೆನ್ನಬಸವನವ್ಯಾಲೆ ಹೇರ್ಯಾರವಳನ್ನ ಕೋಲುಕೋಲನ್ನಿರೆ ೮

ಚೆನ್ನಬಸವನವ್ಯಾಲೆ ಹೇರ್ಯಾರವಳನ್ನ ಕೋಲುಕೋಲನ್ನಿರೇ
ಜಮಖಂಡಿ ಪ್ಯಾಟೀಗ್ಹಚ್ಚ್ಯಾರವಳನ್ನ ಕೋಲುಕೋಲನ್ನಿರೆ ೯

ಜಮಖಂಡಿ ಪ್ಯಾಟೀಗ್ಹಚ್ಚ್ಯಾರವಳನ್ನ ಕೋಲುಕೋಲನ್ನಿರೇ
ಗಂಡಂಬುರಾಯ ಕೊಂಡಾರ ಒಯ್ದ್ಯಾನ ಕೋಲುಕೋಲನ್ನಿರೆ ೧೦

ಗಂಡಂಬುರಾಯ ಕೊಂಡಾರ ಒಯ್ದ್ಯಾನ ಕೋಲುಕೋಲನ್ನಿರೆ
ಅತ್ತೆಂಬು ರಂಬಿ ಹೊತ್ತಿಸಿ ಹುರಿದಾಳ ಕೋಲುಕೋಲನ್ನಿರೆ ೧೧

ಅತ್ತೆಂಬು ರಂಬಿ ಹೊತ್ತಿಸಿ ಹುರಿದಾಳ ಕೋಲುಕೋಲನ್ನಿರೇ
ಮಾವಂಬು ರಾಯ ಮಸ್ಗೂಸಿ ಉಂಡಾನ ಕೋಲುಕೋಲನ್ನಿರೆ ೧೨

ಮಾವಂಬು ರಾಯ ಮಸ್ಗೂಸಿ ಉಂಡಾನ ಕೋಲುಕೋಲನ್ನಿರೇ
ಬಲ್ಲಿದರೆಲ್ಲ ಇದರರ್ಥ ಒಡಿರೆಂದು ಕೋಲುಕೋಲನ್ನಿರೆ ೧೩



## * ಗುಜುಗುಜು ಮೂಪುರಿ

ಇತ್ತಂಡವರು:— ಗುಜಗುಜ ಮೂಪುರಿ ಆಡೋಣ
ಗುಜೇರ ಮೂಪುರಿ ಆಡೋಣ
ಸಾಮದಂಡಿ ಆಡೋಣ
ಸರಲೋಕಕ್ಕೆಲ್ಲ ತಿಳಿಸೋಣ ॥ ಪ ॥

ಇತ್ತಂಡದವರು:— ಗುಜಗುಜ ಮೂಪುರಿ ಗಂಡವರು
ಗುಜೇರ ಮೂಪುರಿ ಹೆಣ್ಣವರು
ಸಾಮದಂಡಿ ಹೆಣೆಯುವರು
ಸರಲೋಕಕ್ಕೆಲ್ಲ ಸಭೆಯುವರು ೧

ಇತ್ತಂಡದವರು:— ಗುಜಗುಜ ಮೂಪುರಿಗೇನೈತೆ
ಗುಜೇರ ಮೂಪುರಿಗೇನೈತೆ
ಸಾಮದಂಡಿಗೇನೈತೆ
ಸರಲೋಕಕ್ಕೆಲ್ಲ ಏನೈತೆ ೨

ಗಂಡು:— ಗುಜಗುಜ ಮೂಪುರಿ ಗಂಡೈತಿ
ಗುಜೇರ ಮೂಪುರಿ ಹೆಣ್ಣವರ
ಸಾಮದಂಡಿಗೆ ಗಂಡೈತಿ
ಸರಲೋಕಕ್ಕೆಲ್ಲ ಗಂಡೈತಿ ೩

ಹೆಣ್ಣು:— ಗುಜಗುಜ ಮೂಪುರಿ ಗಂಡವರ
ಗುಜೇರ ಮೂಪುರಿ ಹೆಣ್ಣೈತಿ
ಸಾಮದಂಡಿಗೆ ಹೆಣ್ಣೈತಿ
ಸರಲೋಕಕ್ಕೆಲ್ಲ ಹೆಣ್ಣೈತಿ ೪

---

* ಈ ಹಾಡಿನ ಬೇರೆ ಬೇರೆ ರೂಪಾಂತರಗಳು ಸಿಗುತ್ತವೆ, ಅವುಗಳಲ್ಲಿ ಅರ್ಥ ಭಾವೋದ್ದೇಶವುಳ್ಳದ್ದನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ.

ಗಂಡು:— ಗುಜಗುಜ ಮಾಪುರಿಗೇನೇನ
ಗುಜೇರ ಮಾಪುರಿಗೇನೇನ
ಸಾಮದಂಡಿಗೇನೇನ
ಸರಲೋಕಕ್ಕೆಲ್ಲ ಏನೇನ ೫

ಚೌಕು ೧:—

ಗಂಡು:— ಒಂದು ರೂಪಾಯಿ ಕೊಡತಿವಿ
ಹೆಣ್ಣ ಕೋಡತಿಗೆ ಹೆಣ್ಣ ಕೋಡತಿಗೆ ॥

ಹೆಣ್ಣು:— ಒಂದು ರೂಪಾಯಿಯೆಂಬುದು
ಹಾಸೂದು ಹಾಸುಣಕಿ
ಬೀಸೂದು ಬೀಸುಣಕಿ
ಗಂಡನ ಮನಿ ದುಡಕಿ
ನಿನ್ನಂಥ ಬಿಡಕಿಗೆ
ಹೆಣ್ಣಿಲ್ಲತಿಗೆ ಹೆಣ್ಣಿಲ್ಲತಿಗೆ

* * * * * * * *

ಗಂಡು:— ಗುಜಗುಜ ಮಾಪುರಿಗೇನ್ವಸ್ತ
ಗುಜೇರ ಮಾಪುರಿಗೇನ್ವಸ್ತ
ಸಾಮುದಂಡಿಗೇನ್ವಸ್ತ
ಸರಲೋಕಕ್ಕೆಲ್ಲ ಏನ್ವಸ್ತ ೬

ಚೌಕು ೨:—

ಗಂಡು:— ವಂಕಿ ಸರಗೀಯ ಇಡತಿವಿ
ಹೆಣ್ಣ ಕೋಡತಿಗೆ ಹೆಣ್ಣ ಕೋಡತಿಗೆ ॥

ಹೆಣ್ಣು:— ವಂಕಿ ಸರಗೀಯ ಭಂಗಾರ
ಮಯ್ಯೊಳು ಒಣ ಭಾರ

ಮಗಳಿಗೆ ದುಡಕಿಯು
ಕಟಿಕಿಟಿ ಬಲು ಜೋರ
ನಿನ್ನಂಥ ಬಿಡಕಿಗೆ
ಹೆಣ್ಣೊಲ್ಲತಿಗೆ ಹೆಣ್ಣೊಲ್ಲತಿಗೆ ॥

ಗಂಡು:— ಗುಜಗುಜ ಮಾಪುರಿ ಮದವೀಗೆ
ಗುಜೇರ ಮಾಪುರಿ ಮದುವೀಗೆ
ನಾಮುದಂಡಿ ತಂದೀವಿ
ನರಲೋಕಕ್ಕೆಲ್ಲ ಕರೆದೀವಿ

* * * * * *

ಚೌಕು ೪:—

ಗಂಡು:— ಬೇಡಿದ್ದ ಕೊಡತಿವಿ ಬೇಡಿದ್ದ ಇಡತಿವಿ
ಹೆಣ್ಣು ಕೋಡತಿಗೆ ಹೆಣ್ಣುಕೋಡತಿಗ ॥

ಹೆಣ್ಣು:— ಕುಲಸುದ್ದ ಮನಿಯಾಗ
ವರಸುದ್ದ ಇರಬೇಕ
ತಾಳ್ಯೊಂದು ಮೂಗುತಿ
ಮಂದ್ಯಾಗ ಮನಿಮುಂದ
ಮದುವೆಯು ಮಾಡಿದರ
ಹೆಣ್ಣ್ಕೊತತಿಗೆ ಹೆಣ್ಕೊತತಿಗೆ ॥

ಇತ್ತಂಡದವರು:— ಗುಜಗುಜ ಮಾಪುರಿ ಅನ್ನೀರೆ
ಗುಜೇರ ಮಾಪುರಿ ಆಡೀರೆ
ಸಾಮುದಂಡಿ ಹೆಣೆಯೀರೆ
ಸರಲೋಕಕ್ಕೆಲ್ಲ ಹಾಡೀರೆ

# A FEW OPINIONS

## ABOUT THE SOCIETY & ITS PUBLICATIONS

"The Co-operative movement which was so long confined mostly to economic fields would now be extended to educational, literary and social activities to pave way for the speedier establishment of a Co-operative commonwealth and for the all round devolopment of the country

Shri. M. P. PATIL

Minister for Co-operation Bombay State
( while inaugurating the Society )

Perhaps for the first time in this country a Co. operative Society has been formed for the promotion of Literature. No doubt there have been Co-operative Societies which have undertaken the publication of books and manuscripts, but they were not by constitution designed to encourage the growth of language and literature.

—FREE PRESS JOURNAL

"The economic hardships that many Kannada writers even of established reputation have to suffer are notoriously acute and distressing. It is therefore gratifying that a co-operative organisation should at last have sprung up with the object of encouraging writers to produce works of quality and paying them reasonably for them."

"......It is because of his admirably lincid, charming and suare style. Besides he knows the pathetic and sordid sides of rural life better than most of our writers."

—THE TIMES OF INDIA

“Shri. Krishna Sharma's collection of short Stories makes a splendid beginning. A strong believer in the theory that art should inspire men to lead the good life. Krishna Sharma contributes tales of idealism set in the country-side of the not too distant past.

Krishna Sharma must be congratulated on maintaining such a uniformly high standard. Each story has its own interest and appeal and it is a delight to read his prose.

—DECCAN HERALD

“ಕರ್ನಾಟಕದಲ್ಲಿ ಸಹಕಾರ ಆಂದೋಲನದ ಸುವರ್ಣ ಮಹೋತ್ಸವವು ತಿಂದು-ತೇಗಿ ಮಾತಿನ ಮಲ್ಲತನವನ್ನು ತೋರದೆ, ವಿಧಾಯಕ ಹೆಜ್ಜೆಯಿಟ್ಟು ಲಕ್ಷ್ಮಿ ಸರಸ್ವತಿಯರ ಸ್ನೇಹ ಸೌಹಾರ್ದವನ್ನು ಕಲ್ಪಿಸಲು ಮುಂದಾದುದಕ್ಕೆ ಹೃತ್ಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇವೆ. ಕರ್ನಾಟಕ ಸಹಕಾರಿ ಸಾಹಿತ್ಯ ಸಂಘವು ಕನ್ನಡ ಸಾಹಿತ್ಯ ನಿರ್ಮಾಣವು ಸತ್ಯಯುತವಾಗುವಂತೆ ಸಹಕರಿಸಲೆಂದು ಆಶಿಸುತ್ತೇವೆ.

—ಕನ್ನಡಿಗ

“ಬೆಟಗೇರಿ ಕೃಷ್ಣಶರ್ಮರ ಪ್ರಭುದ್ಧ ವಿದ್ವತ್‌ಸಂಪತ್ತು, ಅನುಭವ ಸಂಪತ್ತು, ಎಲ್ಲಾ ಕತೆಗಳಲ್ಲೂ ಉತ್ತಮ ಸಾಹಿತ್ಯ ಸಂಪತ್ತನ್ನು ದಾನ ಮಾಡಿದಂತೆ, ಸಹಕಾರಿ ಸಾಹಿತ್ಯ ಸಂಘದ ಉದ್ದೇಶವನ್ನು ಸಾರ್ಥಕಗೊಳಿಸಿದೆಯೆನ್ನಬಹುದು.”

ಜಯಂತಿ—

ಕತೆಗಳ ಬೆಳವಣಿಗೆ ಹಾಗು ಓಟದಲ್ಲಿ ಎಲ್ಲಿಯೂ ತಡೆಯಿಲ್ಲ; ಹೇಳುವ ರೀತಿ ಸರಸ ಹಾಗು ಆಕರ್ಷಕವಾಗಿದೆ. ಅಲ್ಲಲ್ಲಿಯ ಸನ್ನಿವೇಶಗಳು ಪ್ರತಿಪಾದನೆಯನ್ನು ಪರಿಣಾಮಕಾರಿಯಾಗಿ ಮನಂಬುಗುವಂತೆ ಗೈದಿದ್ದಾರೆ. ಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸುವ ಜಾಣ್ಮೆ, ಅದನ್ನು ಸ್ಫುಟವಾಗಿ ಅಚ್ಚೊತ್ತುವಂತೆ ವಿವರಿಸುವ ಕಲೆ ಲೇಖಕರಿಗೆ ಚೆನ್ನಾಗಿ ಸಾಧಿಸಿದೆ.

— ಜಯಕರ್ನಾಟಕ

“ಜನಪದ ಜೀವನ”ವು ಹಳ್ಳಿಯ ಜನಪದ ವಿವಿಧ ಮುಖಗಳನ್ನು ಅದರಲ್ಲೂ ಬಡತನದ ಬಾಳನ್ನು ದಯದೃಷ್ಟಿಯಿಂದ ಈಕ್ಷಿಸಿ, ಹೃದ್ಯವಾಗಿ ಚಿತ್ರಿಸುತ್ತಿದೆ ಕೃಷ್ಣ

ಶರ್ಮರ ಕತೆಗಳಲ್ಲಿ ಎದ್ದು ಕಾಣುವ ಅಂಶವೆಂದರೆ, ಇವರ ವಿಶಿಷ್ಟ ವ್ಯಕ್ತಿತ್ವ, ಪ್ರಾಚೀನವಾದ ಕನ್ನಡ ಸಂಸ್ಕೃತಿಯ ಬಗೆಗೆ ಇವರಿಗೆ ಇರುವ ಅಪಾರ ಅಭಿಮಾನ.

—ಧಾರವಾಡ ಆಕಾಶವಾಣಿ ವಿಮರ್ಶೆ

"ಜನಪದ ಜೀವನ" ದಲ್ಲಿರುವ ಏಳೂ ಸಣ್ಣ ಕತೆಗಳು ಒಳ್ಳೆಯ ಕತೆಗಳಾಗಿವೆ. ಶ್ರೀ. ಕೃಷ್ಣಶರ್ಮರು ಪ್ರತಿಯೊಂದು ಕತೆಯನ್ನು ಬಹು ಪರಿಣಾಮಕಾರಿಯಾಗಿ ಹೇಳಿದ್ದಾರೆ.

"ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ"ದವರು ಒಳ್ಳೆಯ ಲೇಖಕರ ಕೃತಿಗಳನ್ನು ಪ್ರಕಾಶಕ್ಕೆ ತರುವ ಕಾರ್ಯವನ್ನು ಕೈಕೊಂಡಿರುವರೆಂದು ತಿಳಿಯುತ್ತದೆ. ಅವರು ತಮ್ಮ ಮೊದಲನೆಯ ಪುಸ್ತಕವೆಂದು ಹೊರಡಿಸಿರುವ "ಜನಪದ ಜೀವನ"ವು. ಅವರು ಒಳ್ಳೆಯ ಪುಸ್ತಕಗಳನ್ನೇ ಪ್ರಕಟಿಸಬಹುದೆಂಬುದಕ್ಕೆ ಸಾಕ್ಷಿಯಾಗಿದೆಯೆಂದು ಹೇಳಬಹುದು.

—ಕರ್ಮವೀರ

# ಬಾ ಳ ಬ ಟ್ಟೆ

## ಶ್ರೀ. ಸಿಂಪಿ ಲಿಂಗಣ್ಣ

"ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ವಚನಕಾರರ ದಿವ್ಯ ತತ್ವಗಳನ್ನು ಜನಸಾಮಾನ್ಯರಿಗೆ ಅರ್ಥವಾಗುವಂತೆ ಬಹು ಸುಲಭವಾದ, ಲಲಿತವಾದ ರೀತಿಯಲ್ಲಿ ಅರುಹಿರುವರು. ಈ ಸಾಹಿತ್ಯದಲ್ಲಿ ಹೆಚ್ಚು ಪರಿಶ್ರಮವುಳ್ಳ ಶ್ರೀ. ಸಿಂಪಿ ಲಿಂಗಣ್ಣನವರು ಒಂದು ವಿನೂತನ ರೀತಿಯಲ್ಲಿ ಈ ಸಾಹಿತ್ಯದ ಪರಿಚಯ ಮಾಡಿಕೊಟ್ಟಿದ್ದಾರೆ."

" ಲೌಕಿಕದ ಜೀವನೋದ್ದೇಶವನ್ನು ಸಫಲಗೊಳಿಸಲು ಅವಶ್ಯವಿರುವ ಸಿದ್ಧಿ ಸಾಧನೆಗಳನ್ನು ಧರ್ಮದ ಹಿನ್ನೆಲೆಯಿಂದ, ಸುಲಭವಾಗಿ ಹಾಗು ಮನೋರಂಜಕವಾಗಿ ಉಪದೇಶ ಮಾಡುವದು ಅತಿ ಕಠಿಣವಾದ ಕಾರ್ಯ. ಈ ಮಹತ್ಕಾರ್ಯವನ್ನು ಶ್ರೀ, ಸಿಂಪಿ ಲಿಂಗಣ್ಣನವರು ಇಲ್ಲಿ ಸಾಧಿಸಿ ಕೃತಕೃತ್ಯರಾಗಿದ್ದಾರೆ. ಅವರ ಶೈಲಿಯಲ್ಲಿ ಲೋಹಚುಂಬಕದ ಸೆಳೆತವಿದೆ. ಪ್ರತಿಯೊಂದು ಮಾತು ಹೃದಯವನ್ನು ಮುಟ್ಟಿ ಮನವನ್ನು ವಿಕಾಸಗೊಳಿಸುವಷ್ಟು ಸಮರ್ಥಶಾಲಿಯಾಗಿವೆ. ಉಪಯೋಗಿಸಿರುವ ನುಡಿಗಟ್ಟು ಹಾಗು ಶಬಗಳು ಅರ್ಥಗರ್ಭಿತವಾಗಿವೆ. ಅವರ ಶಬ್ದ ಸಂಪತ್ತಿನ ಅಡೊಂಬೊಲದಲ್ಲಿ ಯಾವ ಪಕ್ಷಿಯೂ ನುಡಿಗಲಿತು ಹಾಡುವಷ್ಟು, ಸಂಪೂರ್ಣವಾಗಿದೆ. ಅವರ ಚಿಕ್ಕ ಚಿಕ್ಕ ವಾಕ್ಯಗಳು ಕೋಲ್ಮಿಂಚಿನಂತೆ ಮನವನ್ನು ತಾಗಿ ಓದುಗರನ್ನು ವಿಚಾರಪರವಶರನ್ನಾಗಿಸುತ್ತಿವೆ.

—ಜಯಕರ್ನಾಟಕ

“ಶ್ರೀ. ಸಿಂಪಿ ಲಿಂಗಣ್ಣನವರು ಕನ್ನಡಿಗರಿಗೆ ಸುಪರಿಚಿತರು. ವೃತ್ತಿ ಅಧ್ಯಾಪನವಾದರೂ ಅವರೊಬ್ಬ ಸಾಧಕರು. “ಬಾಳ ಬಟ್ಟೆ” ಯು ಅವರ ಮೂರು ತಪಗಳ ಅಭ್ಯಾಸ ಅನುಭವಗಳ ಫಲವಾಗಿದೆ.

“ಶ್ರೀ. ಸಿಂಪಿ ಲಿಂಗಣ್ಣನವರ ಭಾಷಾ ಶೈಲಿ ಮೊದಲೇ ಮೋಹಕ, ಅದರಲ್ಲಿಯೂ ಈ ವಿಷಯವು ಅವರಿಗೆ ಅಚ್ಚುಮೆಚ್ಚಿನದಾದುದೆಂದು ಪ್ರತಿ ವಾಕ್ಯವೂ ಪ್ರತಿ ಶಬ್ದವೂ ಒಮ್ಮೆ ಓದಿದರೆ ಮರೆಯದಂತೆ ಪ್ರಭಾವ ಪೂರ್ಣವಾಗಿವೆ. ನಿಜವಾಗಿಯೂ ಕನ್ನಡ ಸಾಹಿತ್ಯ ಭಾಂಡಾಗಾರಕ್ಕೆ ಇದೊಂದು ಬೆಲೆಯುಳ್ಳ ಕೊಡುಗೆಯೆಂದು ಹೇಳದಿರಲಾರೆವು.

—ಜಯಹಿಂದ

# ಶಬ್ದಕೋಶ

ಅನಗಾಲ— ಸದಾ; ಯಾವಾಗಲು; ಚಿರ.

ಅರತಿ— ಪ್ರೀತಿ; ಪ್ರೇಮ.

ಅಗ್ಗ— ಕೀಳ; ಹೀನ; ಬೆಲೆಬಾಳದ.

ಆಯ— ಧಾನ್ಯರೂಪದ ವರ್ಷದಕೂಲಿ

ಆಂಬ್ರ— ಸಾರು; ಹುಳಿಪಲ್ಲೆ.

ಇಂಜಾಣ— ಕತ್ತಲೆ.

ಇಂಬು— ಸ್ಥಾನ; ಸ್ಥಳ.

ಉಟ್ರ— ನೀರಿಗೆಯ ಗಂಟು.

ಉತ್ತಿಕ— ವಂಶಸ್ಥ; ವಾರಸಾದರ.

ಎರವು— ಈಡು; ಕೈಗಡ; ಆಹುತಿ.

ಎಡ್ಡ— ಸೊಕ್ಕು; ಹೆಮ್ಮೆ.

ಒಡ್ಲ— ಒಡಲು; ಹೊಟ್ಟೆ.

ಕಾತೆ— ಗಂಗಾದೇವಿ; ಹೊಂಡ.

ಕಾಕು— ವಕ್ರ; ವಂಚಕ; ಕೆಟ್ಟ, ಪ್ರಣಯಿಗಳು ಸಿಳ್ಳು ಹೊಡೆಯುವುದು.

ಕಾಟ್ಯೆ— ಮೋಸ; ಠಕ್ಕ.

ಕ್ವಾಟಿ— ಕೋಟೆ; ಕಿಲ್ಲೆ.

ಕಿಚಡಿ— ಮೆತ್ತನ್ನ ಅನ್ನ.

ಕೀಡೋಳಿ— ಕಿಡಿಗೇಡಿ; ತುಂಟ.

ಕುಣಕಾಲಿ— ಚಂಚಲೆ; ವೈಯಾರಿ, ಸಿಂಗಾರಿ

ಕುದ್ದಲಗೇಡಿ— ಸ್ವಾರ್ಥಿ; ದುಷ್ಟ, ಕುಹಕ, ಬ್ರಾಹ್ಮಣ.

ಕುತ್ತು— ಪ್ರಾಣಸಂಕಟ ಆಪತ್ತು; ವಿಷವೇಳೆ.

ಕುಲಿ— ಬಚ್ಚಲ, ಸ್ನಾನಗೃಹ.

ಕಂದ್ಹಾಕು— ಹಲಿವುಳಿ; ದಿನ ತುಂಬದೆ ಈಯುವುದು;

ಕೆಂಚೆ— ಕೆಂಪೆ; ಚಲುವೆ; ಕೆಂಪು ಮೈಬಣ್ಣದವಳು.

ಗಾಲಮೇಲ— ಬುಡಮೇಲು.

ಗುಜ್ಜಿ— ಗಿಡ್ಡಿ; ಒಪ್ಪುಳ್ಳ ಹೆಣ್ಣು, ಮಾಟವಂತಿ; ಚಲುವೆ.

ಗೈಯಾಳಿ— ಮಾತುಗಂಟೆ; ದಿಟ್ಟೆ;

ಗೊಂಗಡಿ— ಕಂಬಳಿ; ಮೂಲಿಗಂಬಳಿ; ವಪ್ಪ ಕರಿಗಂಬಳಿ.

ಗೊಂದಿ— ಸಣ್ಣ ಸಂದಿ.

ಚಟಕಿ— ಸಣ್ಣ ಕುಡಿಕೆ.

ಚಾಜ— ಹಕ್ಕು; ಹೆಣ್ಣಿಗೆ ತವರು ಮನಿಯ ಮೇಲಿನ ಹಕ್ಕು.

ಚಿಟ— ಚಿಕ್ಕ; ಸಣ್ಣ.

ಚಿಲ್ಲು— ಕವರ ತೊಗಲ ಬಿಂಗರಿ.

ಚೊಕ್ಕ— ಸ್ವಚ್ಛ; ನಿರ್ಮಲ; ಹಸನುಳ್ಳ.

ಚೆಂಚೆ— ಸಂಜೆ; ಸಂಧ್ಯಾಕಾಲ.

ಚೊಂಗೇವು— ಒಂದು ತರದ ಸಿಹಿ ತಿನಸು.

ಜೀಕ— ತೂಗಾಟ; ತೂಗುವದು.

ಜೀತ— ನೌಕರಿ, ಕರಾರಿನಿಂದಿರುವ ಹೊಲಗೆಲಸ.

ಜಿಡ್ಡಿ— ಸಣ್ಣ ಬಾಗಿಲು.

ಜುಳಕ— ತೀಕ್ಷ್ಣ; ಚುರಕು.

ಜಂಗಿ— ಪ್ರಸಿದ್ಧ; ಬಹಳ.
ಜಂಪು— ನಿದ್ದೆ; ಪ್ರಾರಂಭ ನಿದ್ರೆ.
ತಬ್ಬು— ಒರಗು; ಮರೆಯಾಗು.
ತಜವಿಜಿ— ಅವಸರ.
ತಾಳಬಿಷ್ಟ— ಸತ್ಯಾನಾಶ.
ತುಡುಕು— ಘುಮುಕು; ಕೆಣಕು.
ತೋವಿ— ಚೀಲ; ತೊಗಟೆ; ಹೊದಿಕೆ.
ತ್ಯಾವ— ಹಸಿ; ತೊಯ್ದು; ತಂಪು.
ದಗದ— ಹೋರೆ; ಕೆಲಸ.
ದಾವುತಿ— ಪ್ರಯತ್ನ; ಶ್ರಮ.
ದಿಡಗ— ಸಂಣ ತಡಸಲು; ದೊಡ್ಡ ನೀರ ಜೋರು.
ದಿಟ್ಟ— ಶೂರ; ಧೈರ್ಯವಂತ.
ದೈವ— ಸಮಾಜ; ನಸಿಬ.
ದೌಲತ್ತು— ಐಶ್ವರ್ಯ; ಸಂಪತ್ತು, ಸಿರಿವಂತಿಕೆ.
ದಂಗು— ಆಶ್ಚರ್ಯ; ಚಕಿತ.
ದಂದುಗ— ಅಡಚಣೆ; ಕಷ್ಟ; ತಾಪ.
ನೀಗು— ಸಾಯು; ಕೈಗೂಡಿಸು.
ನಂಜು— ವಿಷ.
ನಿಪ್ಪತಗಿ— ದಿಕ್ಕಿಲ್ಲದ; ವಂಶಸ್ಥರಿಲ್ಲ.
ಬಡಿವಾರ— ಸೋಗುತನ; ಒಣಹೆಮ್ಮೆ; ದಿಮಾಕ.
ಬತ— ಹರಕೆ; ವ್ರತ.
ಬವಣೆ— ಸಂಕಟ; ಬವಳಿ; ತ್ರಾಸು.
ಬಳುವಳಿ— ತವರು ಮನೆಯವರು ಮಗಳಿಗೆ ಕೊಟ್ಟದನಕರ ಸಂಪತ್ತು.
ಬಾಗೇವು— ಸಂಪತ್ತು.
ಬಾಡುಗಳ್ಳ— ಬ್ರಾಹ್ಮಣ.
ಬಾರಲ— ಅಂಗಾತ; ದಬ್ಬು.
ಬೂದ— ಸುಗ್ಗಿಯ ಲಿಂಗ; ಬುದ್ಧಿವಂತ ಲಿಂಗ; ಅಲ್ಲಮಪ್ರಭು
ಬೇಗು— ಸಂಜೆ; ಸಂಧ್ಯಾಕಾಲ.
ಬಿನ್ನಾಯ— ಊಟದಕರೆ; ಆಮಂತ್ರಣ.
ಬಿಂಕ— ಠುಮುಕು; ಒನಪು; ದಿಮಾಕ.
ಮಸಲತ್ತು— ಹೊಂಚು; ಕುತಂತ್ರ.
ಮಾವುರ— ಪರಿಶುದ್ಧ.
ರವದಿ— ಮೇವಿನ ಗರಿ.
ಲಜ್ಜೆ— ನಾಚಿಕೆ.
ಲೆಂಕ— ಸೇವಕ.
ವಡ್ಯಾಣ— ಡಾಬು; ಟೊಂಕದ ಆಭರಣ; ಕಟಿಸೂತ್ರ.
ವಾರಿ— ಸರಕಲ; ಕೊಳ್ಳ.
ವಾರಿಗೆ— ಒಂದೇ ವಯಸ್ಸಿನ.
ವಾಸ್ಯಾಡು— ವಾದಿಸು.
ವಾಳಿ— ಅಸಭ್ಯ; ಮಾತು ಕೇಳದ.
ಸದರು— ಓಲಗ; ಸಭಾಮಂಟಪ.
ಸದಲು— ಬದುಕು; ದ್ರವ್ಯ, ಧನಧಾನ್ಯ ಸಂಪತ್ತು.
ಸಂಗ— ಗೆಳೆತನ.
ಸಂಗಟಿ— ದಪ್ಪಗಂಜಿ; ತಿಳುವನ್ನ; ಅಳ್ಳಕನುಚ್ಚು.
ಸಿಂತರಿಸು— ಅಲ್ಲಗಳೆ; ಪ್ರೋತ್ಸಾಹ ಕೊಡದಿರು
ಸಿಂದ— ಚೆಂದ; ಒಪ್ಪಿದ.
ಸುಂದ— ಸುಸ್ತು; ಚುರುಕಿಲ್ಲದ; ತಡ; ಮಬ್ಬು.
ಹಣಕ— ಪಟಿಂಗ; ದುಷ್ಟ; ನೀಚ.
ಹಮ್ಮು— ಹೆಮ್ಮೆ.
ಹರಲಿ— ಅಪವಾದ.
ಹರ್ಯಾಗ— ಮುಂಜಾನೆ.
ಹಲಬು— ಬಿಕ್ಕಿ ಬಿಕ್ಕಿ ಅಳು.
ಹ್ಯಾಂವ— ಹೇವ; ಅಭಿಮಾನ.
ಹಿಂಗು— ಕೈಗೂಡು.
ಹೇಯ— ತಿರಸ್ಕಾರ; ಅಸಹ್ಯ.

# ಒಪ್ಪೋಲೆ

| ತಪ್ಪು | ಪುಟ | ಸಾಲು | ಒಪ್ಪು | ತಪ್ಪು | ಪುಟ | ಸಾಲು | ಒಪ್ಪು |
|---|---|---|---|---|---|---|---|
| ಆರಳೆಲ್ಗೆ | ೧ | ೧೧ | ಅರಳೆಲೆ | ದುಂಡು | ೪೨ | ೧೩ | ದುಂಡುಮೆ |
| ಹಬ್ಬಡೂಟಿ | ೧ | ೧೨ | ಹಬ್ಬದೂಟ | ಘಾಟಿ | ೪೩ | ೮ | ಘಾಟಿ |
| ಹರಹರಸಿ | ೩ | ೬ | ಹರಹರನೆ | ಘಟ್ಟ | ೪೩ | ೨೪ | ಘಟ್ಟಿ |
| ಸಾಕಾಗುತನಕ | ೩ | ೧೮ | ಸಾಕಾಗುತನ | ತಂಬಿಟು | ೪೯ | ೯ | ತಂಬಿಟ್ಟು |
| ಬರದ್ದಂಗ | ೭ | ೧೬ | ಒರದ್ದಂಗ | ಗಂಡವಾರಿ | ೫೮ | ೧೦ | ಗಂಡಗಾರಿ |
| ಅರಳೆ | ೧೫ | ೫ | ಆರಳ | ಬಡವಾಕೆ | ೫೯ | ೧೩ | ಬಡಲಾರೆ |
| ನಮ್ಮೃತ | ೧೭ | ೧೦ | ನಮ್ಮೃತ್ತ | ನ್ಯೆಮನವ | ೬೨ | ೧೧ | ವೈಮನವ |
| ಪವೃತ | ೨೦ | ೧೦ | ಪರವೃತ | ಇರತಾರೆ | ೬೨ | ೧೩ | ಇರಲಾರೆ |
| ಪೆಲ್ಲೇವ | ೨೧ | ೯ | ಪಲ್ಲೇವ | ಸಡಬೇಕ | ೬೬ | ೧ | ಸುಡಬೇಕ |
| ಅನಗಾಡ | ೨೧ | ೧೮ | ಅನಗಾಲ | ಹಿಂಗೇಸೊ | ೬೮ | ೧೮ | ಹಿಂಗೀಸೊ |
| ಖಾನ | ೨೪ | ೧೩ | ಖಾನ | ನೀನಾರೊ | ೬೮ | ೨೧ | ನೀನಾಡೊ |
| ಹೇವು | ೨೪ | ೧೩ | ಹೋವು | ಕೊಡತಾರೆ | ೭೦ | ೪ | ಕೊಡಲಾರೆ |
| ಗುಟ್ಟ್ಯಾಗೊ | ೨೫ | ೯ | ಗುಟ್ಟ್ಯಾಗೊ | ಡಬಳದ | ೭೧ | ೨೩ | ಡಂಬಳದ |
| ಈಟ | ೨೫ | ೧೮ | ಈಟ | ರಗಲ್ಡಿಂಡಿ | ೭೧ | ೨೪ | ರಗತ್ತಿಂಡಿ |
| ಸುರಸ್ಯಾನೊ | ೨೮ | ೧೦ | ಸುರಸ್ಯಾರೊ | ತಿಳಿದೂತ | ೭೩ | ೪ | ತಿಳಿವೂತ |
| ಗುಂಡಿರೊ | ೨೮ | ೧೭ | ಗುಂಡಿಲೊ | ವೇವರಿಗೆ | ೭೫ | ೫ | ದೇವರಿಗೆ |
| ಕಪಿತೂರಿ | ೨೯ | ೪ | ಪಿತೂರಿ | ವಿಣಾವಾಣಿ | ೭೮ | ೬ | ವೀಣಾವಾಣಿ |
| ಚೆನ್ನಮ್ಮ | ೨೯ | ೧೧ | ಚೆನ್ನಮ್ನ | ಮಾಸುರಿ | ೭೮ | ೧೨ | ಮಾಪುರಿ |
| ಮೂಲ | ೨೯ | ೧೮ | ಮೂಲ | ಚಂದುಗುತ್ತಿ | ೨೯ | ೧೨ | ಚಂದ್ರಗುತ್ತಿ |
| ರಾಯಣ್ಣ | ೩೧ | ೪ | ರಾಯಣ್ಣ | ನೆನ್ನೊಟ್ಟಿ | ೨೯ | ೧೧ | ನಿನ್ನೊಟ್ಟಿ |
| ಉರಿಗಣ | ೩೧ | ೪ | ಉರಿಗಣ್ಣ | ಮುಡಿಯೂವ | ೮೨ | ೧೪ | ಮುಡಿಯೂವ |
| ಹೆಣು | ೩೧ | ೧೪ | ಹೆಣ್ಣು | ಒಡೆಯುವದು | ೮೮ | ೫ | ಬಡಿಯುವದು |
| ಪಂದರು | ೩೮ | ೪ | 'ಬಂದರು | ಮನನ್ನಸಿ | ೮೯ | ೧೦ | ಮನ್ನೂಸಿ |
| ಒಣಮಾಂ | ೪೦ | ೫ | ಒಣಮಾರಿ | | | | |